

# ಸಿದ್ಧಗಂಗಾ

ಜುಲೈ ೧೯೯೯






ಬೆಂಗಳೂರಿನ ರಾಜಾಜಿನಗರದಲ್ಲಿರುವ ಶ್ರೀ ಶರಣ ಸೇವಾ ಸಮಾಜ ಜೂನ್ ೨೦ರಂದು ಏರ್ಪಡಿಸಿದ್ದ ಶ್ರೀ ವರಸಿದ್ಧಿವಿನಾಯಕ ಸ್ವಾಮಿ ದೇವಾಲಯದ ಶಿಖರ ಕಲಶ ಸ್ಥಾಪನೆ, ಕುಂಭಾಭಿಷೇಕ, ಗೋಪುರ ಉದ್ಘಾಟನೆ ಸಮಾರಂಭದಲ್ಲಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು, ಶ್ರೀ ಸುರೇಶ್ ಕುಮಾರ್ ಮತ್ತು ಶ್ರೀ ಎಂ.ಎಸ್. ಗುರುಪಾದಸ್ವಾಮಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೫ ಜುಲೈ ೧೯೯೯ ಸಂಚಿಕೆ : ೭


ಪ್ರಧಾನ ಸಂಪಾದಕರು
ಚೆನ್ನಪ್ಪ ಎರೆಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಟಿ. ಕೆ. ನಂಜುಂಡಪ್ಪ
ಡಾ. ಎಂ.ಎನ್. ಚನ್ನಬಸಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


ಲೇಖಕರ ಅಭಿಪ್ರಾಯಗಳು ಶ್ರೀ ಮಠದ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ .....




ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಚಂದಾ ವಿವರ :
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

## ರಾಷ್ಟ್ರ ಸಂರಕ್ಷಣೆಯಲ್ಲಿ ವೀರಯೋಧರು.....

ಆತ್ಮೀಯರೆ,

ಪಾಕಿಸ್ತಾನದ ದುರಾಕ್ರಮಣ, ದುರ್ವರ್ತನೆಯಿಂದಾಗಿ ಕಳೆದ ತಿಂಗಳಿನಿಂದ ಕಾರ್ಗಿಲ್ ಭಾರತೀಯರ ಮನೆಮಾತು. ಯುದ್ಧದ ಸುದ್ದಿಸ್ಫೋಟಕ. ವೀರಯೋಧರ ಯಶೋಗಾಥೆ, ಚಳಿ ಮಳೆಗಾಳಿ ಮಂಜು ಬಿಸಿಲು ಕಲ್ಲು ಮುಳ್ಳುಗಳ ಲೆಕ್ಕಿಸದೆ ಮುನ್ನುಗ್ಗುತ್ತಿರುವ ದಿಟ್ಟ ಹೆಜ್ಜೆ. ಮುಷ್ಕೋ ಬೆಟ್ಟದ ಅಂಚಿನ ಚೆಜಿಲಾ, ಟೈಗರ್ ಹಿಲ್ಸ್, ದ್ರಾಸ್, ಕಕ್ಸರ್, ಬಟಾಲಿಕ್, ಟುರ್ಟ್ರುಕ್, ಜುಬಕ್ ಪ್ರದೇಶಗಳಲ್ಲಿ ಹೋರಾಟ ನಡೆಸುತ್ತಿರುವ ಭಾರತದ ಸೈನಿಕರ ಕೆಚ್ಚೆದೆಯ ಸಂಘರ್ಷ, ಅಪರಿಮಿತ ದೇಶಭಕ್ತಿ. ಗೆಲುವೆನೆಂಬ, ಕೊಲುವೆನೆಂಬ ವೀರಭಾಷೆ. ಶತ್ರುಗಳನ್ನು ಬಗ್ಗು ಬಡಿಯುವ ಸಾಹಸ. "ನಿಮಗೆ ನನ್ನ ಬಗ್ಗೆ ಹೆಮ್ಮೆಎನಿಸಬೇಕು. ಈ ಸಮವಸ್ತ್ರದಲ್ಲಿ ದೇಶಕ್ಕಾಗಿ ಕೊಂಚವಾದರೂ ಸಮರ್ಪಿಸುತ್ತಿದ್ದೇನೆ. ಜೀವಮಾನದಲ್ಲಿ ಸಿಗುವ ಅದ್ಭುತ ಅನುಭವ ಈ ಹೋರಾಟದಲ್ಲಿ ಸಿಗುತ್ತಿದೆ" ಎಂದು ಮೇಜರ್ ವಿವೇಕ್ ಗುಪ್ತಾ ಅವರು ವೀರಮರಣವನ್ನಪ್ಪುವ ಮೊದಲು ತಮ್ಮತಂದೆಗೆ ಬರೆದ ಪತ್ರದಲ್ಲಿ ನುಡಿದರೆ, "ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ವೀರಯೋಧನ ವಿಧವೆ ಎಂದು ಕರೆಸಿಕೊಳ್ಳುವುದು ನನಗೆ ಅಪಮಾನವಲ್ಲ, ಬದಲಿಗೆ ಆತ್ಮಸಮ್ಮಾನದ ವಿಷಯ" ಎನ್ನುವ ಸುಮಿತ್ರರಂಥವರ ದೇಶಾಭಿಮಾನ ನಮಗೆ, ಯುವ ಜನಾಂಗಕ್ಕೆ ಇಂದು ಆದರ್ಶವಾಗಬೇಕು.

ಕನ್ನಡ ನಾಡಿನ, ಸೈನಿಕರು ಈ ಸಂದರ್ಭದಲ್ಲಿ ತೋರಿಸಿರುವ ವೀರ, ಪೌರುಷಗಳು ಅಭಿಮಾನಪೂರ್ಣ. "ವಿಜಯ್ ಸೇನಾ ಕಾರ್ಯಾಚರಣೆ"ಯಲ್ಲಿ ಪ್ರಾಣದ ಹಂಗು ತೊರೆದು, ದೇಹದ ರಕ್ತ ಬಸಿದು, ತಾಯ್ನಾಡಿನ ಮಾನ ಸಂರಕ್ಷಣೆಗಾಗಿ ಜೀವ ತೆತ್ತಿರುವ ಶಿವಬಸಯ್ಯ ಕುಲಕರ್ಣಿ, ಮೊಹಿಲನ್ ಸುಬ್ರಹ್ಮಣ್ಯನ್, ಸಿಂಗೂರು ಮೇದಪ್ಪ, ದಾವಲಸಾಬ ಅಲಿಸಾಬರು ಕನ್ನಡಿಗರೆಲ್ಲರ ಹೃದಯತುಂಬಿ ನಿಂತಿದ್ದಾರೆ. ಸ್ಮರಣೀಯ ವೀರ ಮರಣವನ್ನಪ್ಪಿದ್ದಾರೆ. ಇತಿಹಾಸದ ಪುಟಗಳನ್ನು ಸೇರಿದ್ದಾರೆ. ಯುವ ಜನಾಂಗಕ್ಕೆ ಸ್ಫೂರ್ತಿಯಾಗಿದ್ದಾರೆ. ಕರ್ನಾಟಕವೂ ರಾಷ್ಟ್ರ ಸಂರಕ್ಷಣೆಯಲ್ಲಿ ಎಂದೂ ಹಿಂದೆ ಬಿದ್ದಿಲ್ಲ; ಬೀಳುವುದಿಲ್ಲ ಎಂಬುದನ್ನು ಮೆರೆದಿದ್ದಾರೆ.

ಚುನಾವಣೆ ಹತ್ತಿರ ಬರುತ್ತಿದೆ. ರಾಜಕೀಯ ಪಕ್ಷಗಳು ವರ್ಣರಂಜಿತ ಮೆರವಣಿಗೆ ನಡೆಸಿವೆ. ಪುರಾಣ, ಕಾವ್ಯಗಳ ಸೋಗು ನಡೆಸಿವೆ. ತಾವೆಲ್ಲರೂ ದೇಶಭಕ್ತರೇ ಎಂದು ಬಿಂಬಿಸುತ್ತಿದ್ದಾರೆ. ದೇಶದ ಉತ್ತರ ಭಾಗದಲ್ಲಿ ವೀರಯೋಧರು ಹೋರಾಟದಲ್ಲಿ ಸಾಯುತ್ತಿದ್ದಾರೆ. ಆ ಹೋರಾಟವನ್ನು ತಮ್ಮಸ್ವಾರ್ಥ ಪ್ರಚಾರಕ್ಕೆ ಬಳಸಿಕೊಳ್ಳುವಷ್ಟು ಹೀನ ಮಟ್ಟಕ್ಕೆ ರಾಜಕಾರಣಿಗಳು ಇಳಿದಿದ್ದಾರೆ. ತಮ್ಮಪಕ್ಷಗಳ ಮುಖಂಡರನ್ನು ಪತ್ರಿಕೆಗಳ ಮೂಲಕ, ಕಟ್ಔಟ್‌ಗಳ ಮೂಲಕ ಕಡ್ಡಿಯನ್ನು ಗುಡ್ಡಮಾಡಿ ಏರು ಬೆಳಕಿನಲ್ಲಿ ಬಿಂಬಿಸುವ ಯಜ್ಞನಡೆದಿದೆ.

ಕ್ರಿಕೆಟ್ ವಿಶ್ವಕಪ್‌ಗಾಗಿ ಕೋಟಿಕೋಟಿ ರೂಪಾಯಿಗಳು ವ್ಯರ್ಥವಾಗಿ ಸೋರಿಹೋದವು. ಹಗಲು-ಇರುಳೆನ್ನದೆ ಲೆಕ್ಕಕ್ಕೆ ಸಿಗದಷ್ಟು ಜನಸಾಗರ ದೂರದರ್ಶನದ ಮುಂದೆ ನಿಂತು, ಕುಂತು, ವೀಕ್ಷಕ ವಿವರಣೆಯನ್ನಾಲಿಸಿದರು. ಪಡೆದದ್ದು ಏನು? ಕಳೆದುಹೋದ ಮಾನವ ಶಕ್ತಿಯೆಷ್ಟು? ಲೆಕ್ಕವಿಟ್ಟವರಾರು? ಭಾರತದಂಥ ರಾಷ್ಟ್ರಕ್ಕೆ ಇದರ ಅಗತ್ಯವಿದೆಯೇ?

ಕಾರ್ಗಿಲ್‌ನಲ್ಲಿ ರಾಷ್ಟ್ರವೀರರ ಹೋರಾಟ, ಮಡಿದ ಯೋಧರ ಆಳೆತ್ತರದ ಕಟ್ಔಟ್‌ಗಳ ಪ್ರದರ್ಶನ ನಮ್ಮಎಳೆಯ ಮಕ್ಕಳ ಮನೋಭೂಮಿಕೆಯಲ್ಲಿ ಬಿತ್ತುವ ಮನಸ್ಸು ಬೇಡವೆ. ಊರೂರಿಗೆ, ಬೀದಿಬೀದಿಗೆ, ಕೇರಿಕೇರಿಗೆ ವೀರಮರಣವನಪ್ಪಿದ ಕೆಚ್ಚೆದೆಯ ಕಲಿಗಳ ಪ್ರತಿಮೆಗಳನ್ನು ಸ್ಥಾಪಿಸಿ ಯುವ ಜನಾಂಗಕ್ಕೆ ದಾರಿತೋರಿಸಬೇಕೆನಿಸುವುದಿಲ್ಲವೆ? ಕ್ರಿಕೆಟ್ ದೊಡ್ಡದಲ್ಲ, ಚುನಾವಣೆಗಳು ದೊಡ್ಡವಲ್ಲ, ದೇಶ ದೊಡ್ಡದು. ದೇಶಕ್ಕಾಗಿ ನಾವು ಅಲ್ಲವೆ?

ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಧರೆಯು ಆಕಾಶಗಳು ಹರಿವನಿಲಗ್ನಿಗಳು
ಜಲ ತಾನು ತಲೆದೋರದಂದನೊಳು । ಅರಳಿರ್ದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಒಡಲಿಲ್ಲದಾ ಗುರುವೆ ಎಡೆಯಿಲ್ಲದಾ ಪರವೆ
ಕಡೆಯಿಲ್ಲದಾ ಅರಿವೆ ಮಹದಿರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಸೊಲ್ಲು ಸೊಮ್ಮನು ಮೀನಿ ಬೆಳಗಿರುವ ಶ್ರೀ ಘನವೆ
ನಾದ ಸುನಾದವ ದಾಟಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಂಡೆನೆಂಬುದು ಮರೆವೆ ಕಾಣೆನೆಂಬುದು ಮರೆವೆ
ಕೂಡಿದೆನೆಂಬುದು ಅದು ಮರೆವೆ । ಅರುಹಿದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಲಿಂಗವ್ಯಾಕುಲಕಾಯ ಸಂಗ ಶರಣರ ಭಾವ
ಜಂಗಮ ಶಿವಜ್ಞಾನ ತವಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅರಿದು ನುಡಿದಾನುಡಿ ಪರತತ್ವತಾನೋಡಾ
ಮರೆದುನುಡಿದಾನುಡಿಯೆ ತಾ ಮಾಯೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅರಿದು ಮರೆದಾ ಗುರುವೆ ಶಿವಯೋಗಿ ಶ್ರೀಘನವೆ
ಮನದ ಕಳವಳ ಕಳೆವ ಶಿವಬೆಳಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅಂಗ ಅನಂಗವ ಅಳಿದು ನಿಂದಿರುವಂಥ
ಲಿಂಗ ನಿಜೈಕ್ಯ ಶ್ರೀ ನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅಂಗಕ್ರಿಯೆಗಳನ್ನೆಲ್ಲ ಲಿಂಗಕ್ರಿಯೆಗಳ ಮಾಡಿ
ನಿಜಲಿಂಗದನುಭಾವವ ತೋರಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ತಾನಳಿದು ತಾನುಳಿದು ತಾನು ತಾನಾಗಿರುವ
ತಾಬೆಳಗಿ ತಾನರಳಿ ನಗುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

### ದೇಶ ಸೇವೆಯೇ ಈಶಸೇವೆ

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪೀ ಗರೀಯಸೀ'. ಹೆತ್ತ ತಾಯಿ, ಹೊತ್ತ ನಾಡು ಸ್ವರ್ಗಕ್ಕಿಂತಲೂ ಶ್ರೇಷ್ಠ ಎನ್ನುತ್ತದೆ ಆರ್ಯವಾಣಿ. ಇಂದು ದೇಶ ಸಂಕಷ್ಟ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಉತ್ತರದ ಕಾಶ್ಮೀರ ಕಣಿವೆಯಲ್ಲಿ ಯುದ್ಧ ನಡೆಯುತ್ತಿದೆ. ಭಾರತದ ವೀರಯೋಧರು ದೇಶಭದ್ರತೆಗಾಗಿ ಜೀವದ ಹಂಗುದೊರೆದು ಹೋರಾಡುತ್ತಿದ್ದಾರೆ. ಈಗಾಗಲೇ ನೂರಾರು ಮಂದಿ ವೀರಮರಣವನ್ನಪ್ಪಿದ್ದಾರೆ. ತಾಯಿನಾಡಿಗಾಗಿ ಸಾವನ್ನಪ್ಪುವುದೂ ಸ್ವಾಗತಾರ್ಹವೆಂಬುದನ್ನು ತೋರಿಸಿದ್ದಾರೆ. ಇದೀಗ ದೇಶ ಎಚ್ಚರಗೊಳ್ಳಬೇಕಾಗಿದೆ. ನಮ್ಮ ಇತರೆಲ್ಲ ಕಾರ್ಯಕ್ರಮಗಳನ್ನು ಪಕ್ಕಕ್ಕೆ ಸರಿಸಿ ದೇಶ ರಕ್ಷಣೆಗಾಗಿ ಮುನ್ನಡೆಯಬೇಕಾಗಿದೆ. ಒಳಜಗಳಗಳು, ಭಿನ್ನಾಭಿಪ್ರಾಯಗಳು, ಗೊಂದಲಗೊಳಿಸುವ ಘೋಷಣೆಗಳು ಈಗ ಬರಬಾರದು. ಈ ದೇಶವನ್ನು ಸ್ವತಂತ್ರ ಸ್ಥಿತಿಗೆ ತಂದ ದೇಶಭಕ್ತರ ಮಹಾಸಂಕಲ್ಪವನ್ನು, ಧೀರೋದಾತ್ತ ದೃಷ್ಟಿಯನ್ನು, ಸ್ಮರಿಸುವ ಅಗತ್ಯ ಅನಿವಾರ್ಯವಾಗಿದೆ. ಭರತಖಂಡಕ್ಕೆ ಸುದೀರ್ಘ ಇತಿಹಾಸವಿದೆ, ಶ್ರೀಮಂತ ಸಂಸ್ಕೃತಿಯಿದೆ, ವಿಶ್ವಮಾನ್ಯ ಜೀವನಕ್ರಮವನ್ನು ರಾಷ್ಟ್ರ ತೋರಿಸಿ ಕೊಟ್ಟಿದೆ. ಶಾಂತಿಪ್ರಿಯ ದೇಶವೆನಿಸಿದೆ. ಆದರೆ ಆತ್ಮರಕ್ಷಣೆಯ ಸಂದರ್ಭ ಬಂದಾಗ ಶತ್ರು ದಮನಕ್ಕಾಗಿ ಎದ್ದು ನಿಲ್ಲಲೇ ಬೇಕಾಗುತ್ತದೆ. ದೇಶ ಋಣವನ್ನು ತೀರಿಸುವ ಸನ್ನಿವೇಶ ಎದುರಾಗಿದೆ. ಅದಕ್ಕಾಗಿ ಯುವಜನತೆ ಇಂದು ಆಮೋದ ಪ್ರಮೋದಗಳನ್ನು ಬಿಟ್ಟು ಮುಂದೆ ಬರಬೇಕು. ದೇಶರಕ್ಷಣೆಯಲ್ಲಿ ಪ್ರಾಣ ತೆತ್ತ ಕುಟುಂಬಗಳಿಗೆ ಧನ-ಧಾನ್ಯ ಧೈರ್ಯ ನೀಡುವ ಮಣಿಹದಲ್ಲಿ ಉದಾರವಾಗಿ ನಡೆದು ಕೊಳ್ಳಬೇಕು. ಭಾರತ ಇಂದು ಆಸೇತು ಹಿಮಾಚಲ ಪರ್ಯಂತ ಏಕದೇಹಿಯಾಗಿ ಎದ್ದು ನಿಲ್ಲಬೇಕು. ಸನ್ನದ್ಧನಾಗಬೇಕು. ತಾಯಿನಾಡಿನ ಸಂರಕ್ಷಣೆಗೆ ದೇಶಸೇವೆಯೇ ಈಶಸೇವೆಯೆಂಬುದನ್ನು ಮರೆಯಬಾರದು.

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

**ಕಟ್ಟರಿಸಿಲ್ಲದ ರಾಜ್ಯ ಕಳ್ಳರ ಭಯ**
**ಒಕ್ಕಲಿಲ್ಲದ ಊರು ಹಾಳು;**
**ಮಕ್ಕಳಿಲ್ಲದ ಮನೆ ಮಸಣವಟ್ಟಿಗೆಯೆಂಬ**
**ಲೋಕದ ದೃಷ್ಟಾಂತದಂತೆ**
**ಮುಕ್ಕಣ್ಣನವರುಹಿಲ್ಲದವನ ಹೃದಯ**
**ಕರ್ಕಸದ ವಿಧಿ, ರಕ್ಕಸರ ಹೊಳಲು ನೋಡಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ।**

ಪ್ರಜರ ಯೋಗಕ್ಷೇಮವನ್ನು ನೋಡಿಕೊಳ್ಳಬಲ್ಲ ರಾಜನಿಲ್ಲದ ರಾಜ್ಯದಲ್ಲಿ ಕಳ್ಳರ ಭಯತಪ್ಪದು. ಎಲ್ಲರಿಗೂ ಆಹಾರ ಸಾಮುಗ್ರಿಗಳನ್ನು ಒದಗಿಸಿಕೊಡಬಲ್ಲ ಒಕ್ಕಲಿಗನಿಲ್ಲದ ಊರು ಹಾಳುಕೇರಿಯಾಗುವುದು. ಮಕ್ಕಳಿಲ್ಲದ ಮನೆ ಸುಡುಗಾಡಿನಂತೆ ಮನಸ್ಸಿಗೆ ಅಸಂತೋಷವನ್ನುಂಟು ಮಾಡುವುದು. ಹೀಗೆಯೇ ಶಿವಜ್ಞಾನವಿಲ್ಲದವನ ಹೃದಯವು ಯಮನ ಹಾಗೂ ರಾಕ್ಷಸರ ಪಟ್ಟಣವಾಗಿ ಪರಿಣಮಿಸುವುದು. ಯಮ ಪಟ್ಟಣದಲ್ಲಿ, ರಾಕ್ಷಸರ ಪಟ್ಟಣದಲ್ಲಿ ಶಾಂತಿ ಸಮಾಧಾನ ಗಳು ಸಿಕ್ಕುವುದೇ ದುರ್ಲಭ. ಹಾಗೆ ಶಿವಜ್ಞಾನಹೀನನಿಗೆ ಸುಖವೆಂಬುದೇ ಇರುವುದಿಲ್ಲ.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಗುರುವೆಂದರೆ...



ಗುರುವೆಂದರೆ ಅದೊಂದು
ತತ್ವ
ಗುರುವೆಂದರೆ ಅದು
ಪ್ರಾಣಸ್ವರೂಪ
ಗುರುವೆಂದರೊಂದು
ಆಧ್ಯಾತ್ಮಿಕ ಸತ್ಯ

ಗುರುವೆಂದರೊಂದು
ಕರುಣೆಯ ಕಡಲೆಂಬ ಮಹಾ ಸರೋವರ.
ಊರಕೆರೆಯಲ್ಲೀಜಿದವನ
ಏರಿ ಬರುವ ತೆರೆಗಳ ನಡುವೆ
ಕಡಲೀಜು ಹೊಡೆಯಲು ಕರೆವ
ಪ್ರದಾತೃ.
ಗೆದ್ದೆನೆನೆ ಗೆಲವಲ್ಲ
ಸೋತೆನೆಂದರೆ ಸೋಲಲ್ಲ

ಗುರುವೆಂದರೆ ಭೂತ ಭವಿಷ್ಯ
ಸುಡು ಸುಡು ವರ್ತಮಾನವ ಎದೆಯ ಪುಸ್ತಕ ಮಾಡಿ
ಕೂತಮೌನಿ.

ಗುರುವೆಂದರೆ ಒಂತಪ್ಪ ಒಂದು
ಕಷ್ಟ ಮುಗಿಬಿದ್ದರೂ
ಎಲ್ಲಸಲಹುವ ವಿಶ್ವಪ್ರೇಮಿ.

ಗುರುವೆಂದರೆ ಶಿಷ್ಯನ ಸರ್ವಸ್ವ
ಮತ್ತು
ಅವನ ಬೆನ್ನಿಗೆ ಕಾವಲು ನಿಂತ
ಬೆಳಕು.

- ವೀಚಿ







# ಸಿದ್ಧಗಂಗಾ ಶಿವಯೋಗಿ ಕಲಿಯುಗದ ಕಾಮಧೇನು

## ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ

- ಡಾ. ಬಿ.ಡಿ. ಜತ್ತಿ
ಭಾರತದ ಮಾಜಿ ಉಪರಾಷ್ಟ್ರಪತಿಗಳು,
'ಶಿವಾನಂದ', ರಮಣ ಮಹರ್ಷಿ ರಸ್ತೆ,
ಬೆಂಗಳೂರು - ೫೬೦ ೦೮೦

ಪರಮಪೂಜ್ಯರನ್ನು ಕುರಿತು ಬರೆಯುವುದೆಂದರೆ ನನ್ನ ಅನಿಸಿಕೆಯಲ್ಲಿ ಅಂಧನು ಆನೆಯ ನೋಡಿದಂತೆ. ಶಿವಯೋಗಿಗಳು ಹೇಳಿದಂತೆ **'ಹಿಡಿದೊಂದು ಕನ್ನಡಿಯ ನೂರಾರು ಜನ ಹಿಡಿಯೆ ಅದರೊಳು ಅವರ ರೂಪು ಕಾಣುವಂತೆ'** ಹೀಗೆ ಎಲ್ಲ ಮುಖದಿಂದಲೂ ಆ ಪ್ರಣವ ಸ್ವರೂಪಿಯ ರೂಪವೇ ಕಾಣುವುದು. ಏಕೆಂದರೆ ಅವರೇ ಒಂದು ಪುಟ್ಟ ವಿಶ್ವವಿದ್ದಂತೆ. ಅವರ ಒಂದೊಂದು ಮುಖಗಳೂ ಒಂದೊಂದು ವಿಶ್ವವನ್ನು ಪ್ರತಿನಿಧಿಸುತ್ತವೆ. ಅವರ ನಿತ್ಯಜೀವನ ಕ್ರಮವೇ ಅನುಸರಿಸುವವರಿಗೆ ಒಂದು ದಾರಿದೀಪ. ಅವರ ಮುಂಧೋರಣೆ, ಕತೃತ್ವ ಶಕ್ತಿ, ಕಾಯಕಯೋಗ, ದಾಸೋಹ, ಕೃಷಿ ಕಾಯಕ ಒಂದೇ ಎರಡೇ. ಈ ರೀತಿ ಪಟ್ಟಿ ಮಾಡುತ್ತಾ ಹೋದರೆ ಅದೇ ಒಂದು ಉದ್ಗ್ರಂಥವಾಗುತ್ತದೆ. ಅವರನ್ನು ಪರುಷಕ್ಕೆ ಹೋಲಿಸಬಹುದು. ಬಸವಲಿಂಗ ಶರಣರು ಹೇಳಿದಂತೆ ಅವರು **'ಪಾದವಿಟ್ಟ ನೆಲವೇ ಸುಕ್ಷೇತ್ರ'** ಅದೇ ಸಿದ್ಧಗಂಗಾ ಕ್ಷೇತ್ರ.

ಜಗತ್ತಿನಲ್ಲಿ ಅನೇಕ ಶಿಲೆಗಳನ್ನು ನೋಡುತ್ತಿದ್ದೇವೆ. ಆದರೆ ಎಲ್ಲ ಶಿಲೆಗಳೂ ಮೂರ್ತಿಗಳಾಗಿಲ್ಲ; ಆಗುವುದಿಲ್ಲ. ಕೇವಲ ಕೆಲವೇ ಶಿಲೆಗಳು ಮೂರ್ತಿಗಳಾಗುತ್ತವೆ. ಕೆಲವೇ ಶಿಲೆಗಳು ಅಂಗಗಳಾಗಿ ಪರಿವರ್ತನೆಗೊಂಡು ಸೂಜಿಗೆ ತನ್ಮೂಲಕ ತನ್ನರಿವನ್ನು ತಾನು ತಿಳಿವುದಕೆ ಸಹಾಯವಾಗುತ್ತವೆ. ಅದರಂತೆ ಪೂಜ್ಯರು ಎಲ್ಲರಂತೆ ಜನ್ಮತಾಳಿ ಬಂದರೂ ಪೂಜೆಗೊಳ್ಳುವ ವ್ಯಕ್ತಿಗಳಾಗಿ ಹೊರಹೊಮ್ಮಿದ್ದಾರೆ. ಅವರು ನಡೆದು ಬಂದ ದಾರಿಯಲ್ಲಿ ಅವರಂತೆ ಇನ್ನೊಬ್ಬರು ನಡೆದು ಬರಲು ಸಾಧ್ಯವೇ? ಇಲ್ಲವೆನ್ನುವ ಹಾಗೆ ಅವರಿಗೂ ತನ್ಮೂಲಕ ಸಮಾಜಕ್ಕೂ, ರಾಜ್ಯಕ್ಕೂ, ರಾಷ್ಟ್ರಕ್ಕೂ ಕೀರ್ತಿಯನ್ನು ತಂದಿದ್ದಾರೆ.

ಇಂದಿನ ದಿನಗಳಲ್ಲಿ ಒಂದು ಚಿಕ್ಕ ಕುಟುಂಬವನ್ನು ನಡೆಸಿಕೊಂಡು ಹೋಗುವುದೇ ಕಷ್ಟ. ಹಿಂದಿನ ಪರಂಪರೆಯ ಅವಿಭಾಜ್ಯ ಕುಟುಂಬಗಳು ಈಗ ನಶಿಸುತ್ತಿವೆ. ಇಂತಹ ಸ್ಥಿತಿಯಲ್ಲಿ ಪ್ರತಿದಿನವೂ ಐದು ಸಾವಿರ ಮಕ್ಕಳಿಗೆ ಸ್ವಲ್ಪವೂ ಚ್ಯುತಿ ಬಾರದ



ಶ್ರೀಶ್ರೀಗಳಿಂದ ಮಕ್ಕಳಿಗೆ ಶಿಕ್ಷಣದ ಜೊತೆಗೆ ಕಾಯಕದ ಪ್ರಾಯೋಗಿಕ ತರಬೇತಿ

ಹಾಗೆ ಊಟ, ವಸತಿ ಕಲ್ಪಿಸಿ ವಿದ್ಯಾದಾನ ಮಾಡುತ್ತಿರುವುದು ನಿಜವಾಗಿಯೂ ಪವಾಡ ಸದೃಶ. ಇಲ್ಲಿ ಜಾತಿಮತ ಪಂಥಗಳಿಗೆ ಆಸ್ಪದವಿಲ್ಲ. ಅನಾಥ ಮಕ್ಕಳಿಗೆ ಅನ್ನ, ಆಸರೆ, ವಿದ್ಯೆ ನೀಡಿ ಅವರ ಬಾಳು ಹಸನಾಗುವಂತೆ ಮಾಡುತ್ತಿರುವ ಈ ಮಠದ ಕಾರ್ಯ ಅದ್ವಿತೀಯವಾದುದು. ಈ ಕಾರ್ಯವನ್ನು ನೋಡಿದರೆ ಕೇವಲ ಒಬ್ಬ ವ್ಯಕ್ತಿಯಿಂದ ಈ ಕಾರ್ಯ ಪೂರೈಸುವುದು ಸಾಧ್ಯವೇ ಎಂಬ ಸಂದೇಹ ಉಂಟಾಗುವುದು. ಆದರೆ ಕ್ರಿಯಾ ಮೂರ್ತಿಗಳಿಂದ ಏನೆಲ್ಲ ಸಾಧ್ಯ ಎಂಬುದು ನಮ್ಮ ಕಣ್ಮುಂದೆ ಇರುವ ನಿದರ್ಶನ. ಕಟು ಸತ್ಯ.

ಭಾರತದಲ್ಲಿ ಅನೇಕ ಧರ್ಮಗಳಿವೆ, ಪಂಥಗಳಿವೆ, ಗುರುಕುಲಗಳಿವೆ, ಗುರುಪರಂಪರೆ ಇದೆ. ಆದರೆ ಕರ್ನಾಟಕದಲ್ಲಿರುವ ಅದರಲ್ಲಿಯೂ ಸಿದ್ಧಗಂಗಾ ಮಠದಲ್ಲಿ ನಡೆದು ಬಂದಿರುವ ಪರಂಪರೆ ಅದ್ವಿತೀಯ. ಎಲ್ಲ ಮತೀಯರ ಏಳ್ಗೆಗಾಗಿ ಹಗಲಿರುಳು ದುಡಿಯುತ್ತಾ ದಾಸೋಹ ನಡೆಸುತ್ತಿರುವುದು ನಿಜವಾಗಿ ಶ್ಲಾಘನೀಯ. ಕೇವಲ ಕೆಲವೇ ಇಂಥ ಗುರುಪರಂಪರೆಯಿಂದ ಸಮಾಜ ಸುಧಾರಣೆ ಸಾಧ್ಯ.

**ಕಾಯಕ**

ಇಷ್ಟಲ್ಲದೇ ಕರ್ನಾಟಕದ ಹೆಬ್ಬಾಗಿಲಲ್ಲಿರುವ ಈ ಸಂಸ್ಥೆಗೆ ಭೇಟಿಕೊಡುವ ಎಲ್ಲ ಭಕ್ತರಿಗೂ ಪ್ರಸಾದ ಒದಗಿಸುತ್ತಿರುವ ಸದ್ಗುರುಗಳು ಕಲಿಯುಗದ ಕಾಮಧೇನುವೇ ಸರಿ. ಇವರು ನಡೆಸುತ್ತಿರುವ ವಿದ್ಯಾಸಂಸ್ಥೆಗಳು ಒಂದೇ, ಎರಡೇ, ಎಲ್ಲ ಬಗೆಯ ವಿಷಯಗಳನ್ನು ತಿಳಿಸುವ, ಮೇಲಾಗಿ ಆಧ್ಯಾತ್ಮ ವಿದ್ಯೆಯನ್ನು ಕೊಡುತ್ತಿರುವ ಈ ಸಂಸ್ಥೆ ಯಾವ ವಿಶ್ವವಿದ್ಯಾನಿಲಯಕ್ಕೂ ಕಡಿಮೆ ಎನಿಸದು. ಇವರು ಅನುಸರಿಸುವ ಕೃಷಿ ಪದ್ಧತಿ ಒಂದು ಮಾದರೀಯ ಸಂಸ್ಥೆ. ಅದರಲ್ಲಿ ಅವರೇ ಉತ್ತಿ, ಬಿತ್ತಿ, ಬೇಸಾಯ ಮಾಡಿ ತೋರಿಸಿ ತನ್ನ ಕಾಲಮೇಲೆ ತಾನೇ ನಿಲ್ಲುವಂತೆ ಮಾಡಿರುವ ಅವರ ಸ್ವಸಹಾಯ ಪದ್ಧತಿ ಅನುಕರಣೀಯ. ಈ ಕಾಯಕಕ್ಕೆ ಸರಿಹೊಂದುವ ಇನ್ನೊಂದು ಮಾದರಿಯುಂಟೇ?

ಪ್ರಣವ ಸ್ವರೂಪಿಗಳ ಪೂಜೆ ಅದೊಂದು ವರ್ಣಿಸಲಸದಳವಾದ ವಿಷಯ. ಬಡವನೇ ಇರಲಿ ಬಲ್ಲಿದನೇ ಇರಲಿ ಲಿಂಗಾಂಗಿಯಾಗಿ ಗುರು-ಕರುಣ ಪ್ರಸಾದಕ್ಕೆ ಅವರ ಎದುರಿಗೆ ಕುಳಿತರೆ ಸಾಕು. ಅವರ ಶಿವಯೋಗ ಹಸ್ತದಿಂದ ಭಕ್ತನ ಮಸ್ತಕಕ್ಕೆ ಭಸ್ಮಧರಿಸಿಕೊಳ್ಳುವ ಭಾಗ್ಯ ಎಷ್ಟು ಮಂದಿಗೆ ದೊರಕುವುದು. ಗುರುಗಳ ಹಸ್ತ ಮಸ್ತಕಕ್ಕೆ ತಗುಲಿದಾಗ ಭಕ್ತನ ದೇಹದಲ್ಲಿ ಆಗುವ ವಿದ್ಯುತ್ ಸಂಚಾರ, ಅನುಭವಿಸಿಯೇ







ಒಕ್ಕಣೆ ಕಾರ್ಯದ ವೀಕ್ಷಣೆ

ಆನಂದ ಪಡೆಯಬೇಕು. ಬಸವಾದಿ ಪ್ರಮಥರ ಕಾಲಕ್ಕೆ ಅಲ್ಲಮನಿಗೆ ಅನಿಮಿಷಯ್ಯನವರಿಂದ ದೀಕ್ಷೆ ಸಿಕ್ಕಿತಂತೆ. ಆದರೆ ಇಂದು ಸದ್ಗುರುಗಳಿಂದ ಸಿಗುವ ಈ ದೀಕ್ಷೆ ವರ್ಣಿಸಲಸದಳ.

**ಸಮಾಜ ವಿಜ್ಞಾನಿ**

ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಸಮಾಜ ವಿಜ್ಞಾನಿಗಳು, ಸಮಾಜದ ಸರ್ವಾಂಗೀಣ ಪ್ರಗತಿಯಾಗಲೆಂದು ಮಕ್ಕಳಿಗೆ ತಿಳಿಯಲೆಂದು ಶಿಕ್ಷಣ ಸಂಸ್ಥೆಗಳನ್ನು ಪ್ರತಿವರ್ಷ ಕೃಷಿ ಮೇಳ, ಕೈಗಾರಿಕಾ ಮೇಳಗಳನ್ನು ಏರ್ಪಡಿಸಿ ತನ್ಮೂಲಕ ಹಿರಿಯ ಪ್ರಜೆಗಳಿಗೂ ಸಹ ಶಿಕ್ಷಣ ಒದಗಿಸುತ್ತಿರುವವು. ಉತ್ತಮ ರಾಸುಗಳಿಗೆ, ಉತ್ತಮ ಕೃಷಿ ತಜ್ಞರಿಗೆ ಆಶಿರ್ವಾದ ರೂಪದಲ್ಲಿ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿರುವರು. ಈ ಸಮಯದಲ್ಲಿ ಜನರಿಗೆ ಪ್ರಸಾದ ವ್ಯವಸ್ಥೆ, ರಾಸುಗಳಿಗೆ ಎಲ್ಲ ವ್ಯವಸ್ಥೆ ಮಾಡಿ ಸುತ್ತಲಿನ ಎಲ್ಲ ಜನರೂ ಒಂದೆಡೆ ಸೇರುವಂತೆ ಮಾಡಿ ಪ್ರೋತ್ಸಾಹಿಸುತ್ತಿರುವರು. ತನ್ಮೂಲಕ ಸಕಲರ ಆರ್ಥಿಕ ಪ್ರಗತಿಗೆ ಕಾರಣೀಭೂತರಾಗಿರುವರು.

ಶರಣ ಮೇಳ ಶ್ರೀಗಳು ಕೈಗೊಂಡ ಇನ್ನೊಂದು ಕಾರ್ಯಕ್ರಮ. ಇಂಥ ಸಮಯದಲ್ಲಿ ಪ್ರವಚನಗಳನ್ನು ಏರ್ಪಡಿಸಿ ಸತ್ಸಂಗಗಳನ್ನೇರ್ಪಡಿಸಿ ಗೃಹಸ್ಥರು ಸತ್ ಚಿಂತನೆಗಳಲ್ಲಿ ತೊಡಗುವಂತೆ ಮಾಡುತ್ತಿರುತ್ತಾರೆ.

**ಗುರು-ಶಿಷ್ಯ ಸಂಬಂಧ**

ಮಕ್ಕಳಿಗೆ ಕೇವಲ ವಿದ್ಯಾಭ್ಯಾಸ, ಪರೀಕ್ಷೆ ಇಷ್ಟೆ ಮುಖ್ಯವಲ್ಲವೆಂದು ಬಗೆದು, ಅವರು ಪೂರ್ಣ ಮನುಷ್ಯರಾಗುವಂತೆ ರೂಪಿಸುತ್ತಿರುವರು. ಅವರ ಮೇಲ್ವಿಚಾರಣೆ ಇಲ್ಲದ ದಿನಗಳೇ ಇಲ್ಲ. ಮಕ್ಕಳ ಉಪಯೋಗಕ್ಕಾಗಿ ಚರ್ಚಾಗೋಷ್ಠಿ, ವಿಚಾರ ಸಂಕಿರಣ, ಮಕ್ಕಳ ಶಿಬಿರಗಳನ್ನು ಏರ್ಪಡಿಸಿ, ಮಕ್ಕಳ ಪ್ರಗತಿಗೆ ಸಹಾಯ ಮಾಡುತ್ತಿದ್ದಾರೆ. ಮಕ್ಕಳ ಮೇಲಿನ ಪ್ರೇಮ ಎಷ್ಟೆಂದರೆ, ಈ ಗುರುಕುಲದಲ್ಲಿ ಅಭ್ಯಾಸ ಮಾಡಿ ಹೋದ ವಿದ್ಯಾರ್ಥಿ ಯಾರೇ ಆದರೂ, ಅವರ ಹೆಸರಿಡಿದು ವಿಚಾರಿಸಿ ಅವರ ಯೋಗ ಕ್ಷೇಮ ನೋಡಿಕೊಳ್ಳುವುದು. ಹೀಗಾಗಿ ಇಲ್ಲಿಂದ ಹೊರ ಹೋದ ಮಕ್ಕಳು ಗುರುಗಳನ್ನು ಗುರುಕುಲವನ್ನು ಮರೆಯದೇ, ತಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತಿರುವರು. ಇದಲ್ಲದೇ ನಿಜಗುರು - ಶಿಷ್ಯರ ಸಂಬಂಧ.

**ನಡೆದಾಡುವ ದೇವರು**

ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ನಡೆದಾಡುತ್ತಿರುವ ದೇವರೆಂದೇ ಜನರ ನಂಬಿಕೆ. ಹೀಗಾಗಿ ಜನರು ತಮ್ಮ ತಮ್ಮಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳಿಗೆ ಕೋರ್ಟು ಕಛೇರಿಗೆ ಹೋಗದೇ ಅನೇಕ ಭಕ್ತಾದಿಗಳು ಗುರುಗಳ ಮುಖಾಂತರ ವ್ಯಾಜ್ಯ ಪರಿಹರಿಸಿಕೊಳ್ಳುತ್ತಿರುವ ವಿಷಯ ಅತೀ ಸಾಮಾನ್ಯ.

ಪ್ರತಿದಿನ ಅನೇಕ ಅಪೇಕ್ಷಿಗಳು, ಮುಗ್ಧ ಹಳ್ಳಿಯ. ಜನರು ಗುರು ಆಶೀರ್ವಾದ ಪಡೆಯುತ್ತಾ ಅವರ ಗುರುತಿನ ಉಂಗುರ, ಅವರಿಂದ ಬರೆಯಲ್ಪಟ್ಟ ತಾಯತ ಹೀಗೆ ಅವರು ನಂಬಿದ ಈ ದೇವರಲ್ಲಿ ತಮ್ಮ ಕೊರತೆಗಳನ್ನು ಹೇಳಿಕೊಂಡು ಮನಃ ಶಾಂತಿ ಪಡೆಯುವುದು ದೈನಂದಿನ ಕಾರ್ಯಕ್ರಮವಾಗಿದೆ.

**ಕ್ರಿಯಾಮೂರ್ತಿ ಭಾಗ್ಯದ ನಿಧಿ**

ಇಷ್ಟೆಲ್ಲ ಇದ್ದರೂ ಗುರು ದಣವನ್ನೇ ಅರಿಯರು. ಸಕಲರಿಗೂ ದರ್ಶನ ಕೊಡುತ್ತಾ, ಆಶಿರ್ವದಿಸುತ್ತಾ, ಮಕ್ಕಳ ಜೊತೆ ಮಕ್ಕಳಾಗಿ, ಗುರುಗಳಾಗಿ, ಯೋಗಿಗಳಾಗಿ ವೇಳೆ ವಿನಿಯೋಗಿಸುತ್ತಿರುವುದು ಸೋಜಿಗಕ್ಕೂ ಸೋಜಿಗದ ಸಂಗತಿ. ಹೀಗೆ ನಮ್ಮೆಲ್ಲರ ಹಲವು ಚಿಂತೆಗಳನ್ನು ತಮ್ಮ ಬೆನ್ನಿಗೆ ಕಟ್ಟಿಕೊಂಡು ಹಗಲೂ ಇರುಳೂ ದುಡಿಯುತ್ತಿರುವ ಈ ಕ್ರಿಯಾ ಮೂರ್ತಿ ನಮ್ಮೆಲ್ಲರ ಭಾಗ್ಯದ ನಿಧಿ. ಕರ್ನಾಟಕದ ಹಾಗೂ ನಾಡಿನ ಪುಣ್ಯ.

ನನ್ನ ಅನಿಸಿಕೆಯ ಪ್ರಕಾರ ಗುರುಗಳು ಕ್ರಿಯಾ ಮೂರ್ತಿಗಳಾಗಿರುವುದೇ ಇಷ್ಟೆಲ್ಲಕ್ಕೂ ಕಾರಣ. ಅವರ ದಿನಚರಿ ಬೆಳಗಿನ ೨-೧೫ ರಿಂದ ಪ್ರಾರಂಭವಾಗಿ ರಾತ್ರಿ ೧೧-೦೦ ಘಂಟೆಯವರೆಗಿನ ಅವರ ಅವಿಶ್ರಾಂತ ಕಾರ್ಯಕ್ರಮಗಳು ಇಂದಿನ ಯುವ ಪೀಳಿಗೆಗೆ ಅನುಕರಣೀಯ. ಅವರು ಶುದ್ಧ ಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧ ಪ್ರಸಾದಗಳನ್ನು ಸಿದ್ಧಗಂಗಾ ಮಠದ ಮೂಲಕ ಎಡೆ ಮಾಡುತ್ತಾ ತ್ರಿವಿಧ ದಾಸೋಹ ಮೂರ್ತಿಗಳಾಗಿದ್ದಾರೆ. ಪೂಜ್ಯರ ಬದುಕೇ ಲಿಂಗಮಯವಾಗಿದೆ. ಪೂಜ್ಯರು ನೂರೊಂದು ವರ್ಷಕ್ಕೂ ಮೇಲ್ಪಟ್ಟು ಬಾಳಿ ವಿಶ್ವದ ಪ್ರಗತಿಗೆ ಮಾರ್ಗದರ್ಶನ ನೀಡುತ್ತಾ ಆಶೀರ್ವದಿಸುತ್ತಿರಲೆಂದು ಆಶಿಸುತ್ತಾ ನಮಿಸುವೆ.

ಭಾಗ-೫

# ಬಸವಣ್ಣನವರ ವಚನಗಳಲ್ಲಿ ಯುಗಪ್ರಜ್ಞೆ ಮತ್ತು ಮೌಲ್ಯಗಳು

-ಸುಜನಾ

**ಹಾವಿನ ಡೊಂಕು ಹುತ್ತಕ್ಕೆ ಸಸಿನ!**
**ನದಿಯ ಡೊಂಕು ಸಮುದ್ರಕ್ಕೆ ಸಸಿನ!**
**ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ!**

ಈ ಬಹು ಸಮರ್ಥ ಪ್ರತಿಮೆಯ ಮೂಲಕ ಶರಣನಿಗೆ ಆತ್ಮಪ್ರತ್ಯಯ ಮಾಡುತ್ತಾರೆ. ಹಾಗೂ ಶಿವಶರಣರ 'ವಕ್ರ ಮಾರ್ಗ'ಗಳನ್ನು ಟೀಕಿಸುತ್ತಿದ್ದ ಅನ್ಯಮಾರ್ಗದವರ ಬಾಯನ್ನೂ ಕಟ್ಟಿಸುತ್ತಾರೆ. (ಈ ರೂಪಕ ನಿವಾರಣೆ ಬೇರೆಡೆ ನೀಡಿರುವೆ)

ಬಸವಣ್ಣನವರಿಗೆ ವೈಯಕ್ತಿಕ ಆತ್ಮಸಾಧನೆ ಒಂದು ಭಾಗವಾದರೆ ಲೋಕೋದ್ಧಾರ ಮೂರು ಭಾಗವಾಯಿತು. ಸಾಮಾನ್ಯರಿಗೆ ಶರಣದೀಕ್ಷೆ ಕೊಡಬೇಕಾದರೆ ಅವರಿಗೆ ತಮ್ಮ ಅಲ್ಪ ಜೀವನದಲ್ಲಿ ಜಿಗುಪ್ಸೆ ಹುಟ್ಟಿಸಬೇಕು. ಪರ್ಯಾಯವಾಗಿ ಶ್ರೇಷ್ಠ ಮೌಲ್ಯವನ್ನೂ ನೀಡಬೇಕು. ಶರಣದೀಕ್ಷೆ ಸ್ವೀಕರಿಸಿಕೊಂಡವರು ಆಮೇಲೆ ನಡೆಸುತ್ತಿದ್ದ ನಾನಾ ವೈಯುಕ್ತಿಕ ಹಾಗೂ ಸಾಮೂಹಿಕ ಲೋಪದೋಷಗಳನ್ನು ಎತ್ತಿತೋರಿ - ಹಲವೊಮ್ಮೆ ಮೃದುವಾಗಿ, ಕೆಲವೊಮ್ಮೆ ಕಟುವಾಗಿ - ತಿದ್ದಬೇಕು. ಶರಣಧರ್ಮ ಬಲಿಷ್ಠವಾಗುವಂತೆ ನೋಡಿಕೊಳ್ಳಬೇಕು. ಇದನ್ನೆಲ್ಲ ಒಪ್ಪದೆ ಪ್ರತಿಭಟಿಸುತ್ತಿದ್ದ ಉತ್ತಮವರ್ಗದವರ ದೌರ್ಬಲ್ಯಗಳನ್ನು ಎತ್ತಿ ಆಡಿ ಅವರನ್ನೂ ನಿರಸ್ತ್ರಗೊಳಿಸಬೇಕು. ಇದರ ಜತೆಗೆ ಬಸವಣ್ಣನವರಿಗೆ ಶರಣಮಾರ್ಗ ನಿರ್ಮಾಣದಲ್ಲಿ ಅಡ್ಡಿಯಾಗಿ ಬಂದವರು ಕೇವಲ ವೈದಿಕಮಾರ್ಗಿಗಳಷ್ಟೇ ಅಲ್ಲ; ಉತ್ತಮ ಜಾತಿಯವರಷ್ಟೇ ಅಲ್ಲ. ಯಾವ ತಾತ್ವಿಕಮತವೂ ಇಲ್ಲದೆ ಬರಿಯ ಜಾತಿಯೊಂದರಿಂದಲೆ ಬದುಕಿದ್ದ ನೂರಾರು ಸಾಮಾನ್ಯ ಜಾತಿಯ ಜನ, ಆ ಮೇಲು-ಕೀಳು ವ್ಯವಸ್ಥೆಯ ರಕ್ಷೆಯೆಲ್ಲ ಅಲಗಿ ಹೋದದ್ದರಿಂದ ಅವರಿಗೆ ಪ್ರಬಲ ವಿರೋಧ ನೀಡಿದುದನ್ನೂ ಮರೆಯಬಾರದು.

ಭಾರತದಲ್ಲಿ ಜಾತಿರಚನಾವ್ಯವಸ್ಥೆ ಹೇಗಿದೆಯೆಂದರೆ ಪ್ರತಿಯೊಂದು ಜಾತಿಯೂ ತಾನು ಮತ್ತೊಂದು ಜಾತಿಯನ್ನು ತನ್ನ ತಲೆಯ ಮೇಲಿಟ್ಟುಕೊಳ್ಳುವಂತೆಯೆ ಇನ್ನೊಂದು ಜಾತಿಯನ್ನು ತನ್ನ ಕಾಲಡಿಯಲ್ಲಿಟ್ಟುಕೊಂಡಿರುವ ಭ್ರಾಂತಿಯಲ್ಲಿದೆ. ಬ್ರಾಹ್ಮಣ ವರ್ಗವನ್ನೇನೊ ಬಹುತೇಕ ಎಲ್ಲರೂ ಶ್ರೇಷ್ಠವೆಂದು ಒಪ್ಪುತ್ತಲೆ ಬಂದರು. ಆದರೆ ಈ ಏಣಿಯ ತುದಿಯ ಮೆಟ್ಟಿಲು ಭದ್ರವಾಗಿರಬೇಕಾದರೆ ಅಡಿಯ ಎಲ್ಲ ಮೆಟ್ಟಿಲೂ ಸ್ವಸ್ಥಾನದಲ್ಲೆ ವ್ಯವಸ್ಥಿತವಾಗಿದ್ದಿರಬೇಕು. ಹೊಲೆಯನೆಂದರೆ ಹತ್ತು ಪಂಗಡ, ಅವರಲ್ಲಿ ಇಂತಿಂಥವರೇ ಮೇಲು; ಒಕ್ಕಲಿಗನೆಂದರೆ ಹತ್ತು ಪಂಗಡ, ಅದರಲ್ಲಿ ಇಂತಿಂಥ ಪಂಗಡದವರೇ ಮೇಲು; ಅಗಸ ಕಮ್ಮಾರ, ಅಕ್ಕಸಾಲಿ, ಕುಂಬಾರ, ನೇಕಾರ - ಇವರಲ್ಲಿ ಒಂದೊಂದು ವರ್ಗವೂ ತಾನು ಮಾಡುವ ವೃತ್ತಿ ಪ್ರಾಮುಖ್ಯಾನುಸಾರವಾಗಿ, ತನ್ನ ವೃತ್ತಿಯ ಆರ್ಥಿಕ, ಸಾಮಾಜಿಕ ಪ್ರಾಧ್ಯಾನ್ಯವನ್ನನುಸರಿಸಿ ಮೇಲು-ಕೀಳು ಎಂದು ಸ್ವಕಲ್ಪಿತ ವ್ಯವಸ್ಥಾ ಸುಖದಲ್ಲಿ ಸ್ಥಾಪಿತವಾಗಿದೆ. ಈ ವ್ಯವಸ್ಥೆಯನ್ನು ಒಡೆಯಬಂದವನ ತಲೆ ಒಡೆದುಹೋಗುತ್ತಿತ್ತು. ಆ ಕಾಲದಲ್ಲಿ. ಲಿಂಗ ಲಾಂಛನ ಈ ತಳ ಮೇಲನ್ನೆಲ್ಲ ತಳಮೇಲು ಮಾಡಿತು. ತನ್ಮೂಲಕವಾಗಿ ಸಾಮಾಜಿಕ ಆರ್ಥಿಕ ವ್ಯವಸ್ಥೆ 'ಘಾಸಿ' ಗೊಂಡಿತು. ಆದ್ದರಿಂದಲೇ ಬಸವಣ್ಣನವರಿಗೆ ಅತ್ಯುಗ್ರವಾದ ಪ್ರತಿಭಟನೆ ಈ ನಾನಾ ಮೂಲದಿಂದ ಬಂತು. ಉತ್ತಮ ವರ್ಗದವರು ಬೌದ್ಧಿಕವಾಗಿ ಪ್ರತಿಭಟಿಸಿದರೆ ಈ ಅಶಿಕ್ಷಿತ ಜನವರ್ಗ ರೂಕ್ಷವಾಗಿ ಪ್ರತಿರೋಧಿಸಿದರು. ಆಗ ಬಸವಣ್ಣನವರು ಆ ಜನತೆಯನ್ನು ಮರುಕದಿಂದ ಒಮ್ಮೆ ಉದ್ಧಾರಕ ನೈಷ್ಠುರ್ಯದಿಂದೊಮ್ಮೆ ಖಂಡಿಸಬೇಕಾಗುತ್ತದೆ. ಅವರು ಮಾಡುವ ಅಲ್ಪ ದೈವಾರಾಧನೆಯನ್ನೂ ಕ್ಷುದ್ರಾಚಾರಗಳನ್ನೂ ಉಗ್ರವಾಗಿ ಟೀಕಿಸಿ ಅವರನ್ನು ನವೋದ್ಧಾರಕ ಸರ್ವಸಮತಾ ಶಿವಮೌಲ್ಯದತ್ತ ಆಹ್ವಾನಿಸುತ್ತಾರೆ. ಒಬ್ಬೊಬ್ಬರೂ ತಮ್ಮ ತಮ್ಮ ಭೀತಿ ಶಮನಕ್ಕಾಗಿ ಒಂದೊಂದು ಅಲ್ಪ ದೈವವನ್ನು ಪೂಜಿಸುತ್ತಿದ್ದರೆ ತಾವೆಲ್ಲ ಒಂದೆ ಶಿವನ ಮಕ್ಕಳೆಂಬ ಭಾವ ಮೂಡುವುದು ಕಷ್ಟ. ಎಲ್ಲಕ್ಕಿಂತ ಮಿಗಿಲಾಗಿ ಹೆದರಿಸುವ ದೈವ, ಕಿರುಕುಳ ಕೊಡುವ ದೈವ, ಪೀಡೆಕಾರುವ ದೈವ ಏನಿದ್ದರೂ ಮೂಢನನ್ನು ತಯಾರು ಮಾಡಬಹುದೆ ಹೊರತು ಅಧ್ಯಾತ್ಮಿಯನ್ನಲ್ಲ, ನಿರ್ಭೀತ ಭಕ್ತನನ್ನೂ ಅಲ್ಲ. ಯಾವ ದೈವ, ಯಾವ ದೀಕ್ಷೆ, ವ್ಯಕ್ತಿಯನ್ನು ಭಕ್ತನನ್ನಾಗಿ ಆದರೆ ನಿರ್ಭಯನನ್ನಾಗಿ ಮಾಡಬಲ್ಲದು? ಯಾವ ದೈವ ತನ್ನನ್ನು ಸದಾ ಭೀತಿಯಲ್ಲೆ ಇಡದೆ, ಸದಾ ತನ್ನ ಕೃಪಾಭಯದಲ್ಲೆ ಬಿಗಿದಿಡದೆ, ಭಕ್ತನನ್ನು ಅರೆದು ಒರೆದು ಪರೆದು





ನೋಡಿ, ಶಕ್ತಿಗೊಳಿಸಿ ಕಡೆಗೆ ಕೈಹಿಡಿದು ಅವನನ್ನು ತನ್ನ ಪಕ್ಕಕ್ಕೆ ತಂದುಕೊಳ್ಳುತ್ತದೆ? ಯಾವ ಮಾಧ್ಯಮ ಅದನ್ನು ಸಾಧಿಸಿಕೊಡುತ್ತದೆ? ಬಸವಣ್ಣನವರಿಗೆ ಅದು ಶಿವಭಕ್ತಿಯಾಗಿ ಲಿಂಗಲಾಂಛನವಾಗಿ ತೋರುತ್ತದೆ. ಇದು ಬರಿಯ ಮತ್ತೊಂದು ಸಮಯಾಚಾರವಾಗದಂತೆ ಆ ಭಕ್ತಿಯನ್ನು ಆದಷ್ಟೂ ತಾತ್ವಿಕವಾಗಿ ಆಧ್ಯಾತ್ಮಿಕವಾಗಿ ಇರುವಂತೆ ಶರಣಮಂಡಲಿ ಎಚ್ಚರವಿರುತ್ತದೆ. ಎಂಥ ಭಕ್ತಿಯೆ ಆಗಲಿ ಅದು ಉದಾತ್ತ ತಾತ್ವಿಕಭಿತ್ತಿಯಿಲ್ಲದೆ, ನಿರ್ಭೀತಿಯನ್ನು ಬೋಧಿಸದೆ ಆಧ್ಯಾತ್ಮಿಕವಾಗಲಾರದು. ವ್ಯಕ್ತಿಯ ಲೌಕಿಕಾಕಾಂಕ್ಷೆಗಳಷ್ಟನ್ನೆ ಭಯಮೂಲಕವಾಗಿ ತೃಪ್ತಿಪಡಿಸದೆ, ಅವನ ಆತ್ಮವನ್ನೂ ಎಚ್ಚರಿಸಿ ಉದ್ಧರಿಸುವಂಥದಾಗಬೇಕು. ಈ ದೃಷ್ಟಿಯಿಂದ ನೋಡಿದಾಗ ಬಸವಣ್ಣನವರು ಸಾಮಾನ್ಯ ಜಾನಪದದ ಕ್ಷುದ್ರಸಮಯಾಚಾರಗಳ ಮೇಲೆ ಗದಾಪ್ರಹಾರ ಮಾಡಿದುದರ ಕರುಣೆ ಅರ್ಥವಾಗುತ್ತದೆ. ವೇದ ಪ್ರತಿಷ್ಠಿತರನ್ನು ಖಂಡಿಸುವಾಗ ತೋರಿದ ನೈಷ್ಠುರ್ಯವೆ ಬೇರೆ. ಈ ಕರುಣಾವೃತ ಭಿಷಗ್ವರನ ಭೇಷಜ ನೈಷ್ಠುರ್ಯವೆ ಬೇರೆ. ಆದರೂ ಇದರಿಂದ ಆಯಾ ಜಾತಿ ದೈವಗಳನ್ನು ಪೂಜಿಸುವ ಪೂಜಾರಿವರ್ಗ ಬಸವಣ್ಣನವರ ಮೇಲೆ ಸಿಡಿದುಬೀಳುತ್ತದೆ. ಅವರಿಗೇನು, ಆ ದೈವಗಳಿಗೇ ಬಡಿಗೆ ಏಟನ್ನು ಕೊಡುತ್ತಾರೆ ಇವರು. ಇದಕ್ಕೆಲ್ಲ ಮೂಲಕಾರಣ ಆ ಸಾಮಾನ್ಯನಿಗೆ ಆಧ್ಯಾತ್ಮ ದಾನಮಾಡುವುದೆ ಆಗಿದೆ. ಅವನನ್ನು ಆತ್ಮವಿದನನ್ನಾಗಿ ಧೀರನನ್ನಾಗಿ ಮಾಡಬೇಕಾಗಿದೆ. ಈ ದಾನ, ಈ ಸಾಧನೆ ಮಹೋನ್ನತವಾದುದೆ ಸರಿ. ಈ ಕಾಲಕ್ಕಿಂತಲೂ ಬಹು ಹಿಂದೆ ಶೂದ್ರನಿಗೆ ಆಧ್ಯಾತ್ಮದಾನವಿರಲಿ ವಿದ್ಯಾದಾನವನ್ನೆ ದುರ್ಲಭವಾಗಿರಿಸಿದ್ದರು. ಸಂಸ್ಕೃತವನ್ನಾಗಲಿ ಶಾಸ್ತ್ರಾಗಮಗಳನ್ನಾಗಲಿ ಓದಕೂಡದು; ಕೇಳಿದರೆ ಕೇಳಿದ ಕಿವಿಗೆ ಕಾದ ಸೀಸವನ್ನೆರೆಯಬೇಕು; ಓದಿದರೆ ನಾಲಿಗೆ ಕೀಳಿಸಬೇಕು - ಎಂಬ ಭಯಾನಕ ವಿಧಿಯನ್ನು ಮಾನಸಿಕವಾಗಿ ನಿರ್ಮಿಸಿದ್ದರು. ಅದಕ್ಕೆ ಕಾರಣ ಆಧ್ಯಾತ್ಮಿಕ ತುಡಿತವಾಗಲಿ ಮೋಕ್ಷಾಭಿಲಾಷೆಯಾಗಲಿ ಜ್ಞಾನದ ರುಚಿಯಾಗಲಿ, ವಿದ್ಯಾಕಾಂಕ್ಷೆಯಾಗಲಿ ಜಾನಪದಕ್ಕೆ ಮೂಡಿದರೆ ಜಾತಿವ್ಯವಸ್ಥೆಯೆ ತಳಮೇಲಾಗುತ್ತದೆ; ಆರ್ಥಿಕ ಸಾಮಾಜಿಕ ವ್ಯವಸ್ಥೆ ಬುಡಮೇಲಾಗುತ್ತದೆ. ಅಷ್ಟೆ ಅಲ್ಲ, ಯಾವ ಜಾತಿಯವನೂ ಮತ್ತೊಬ್ಬ ಉತ್ತಮ ಜಾತೀಯನ ಕಸುಬನ್ನೂ ಕಲಿಯುವುದು ಅಕ್ಷಮ್ಯ ಅಪರಾಧವೆ ಆಗಿತ್ತು, ಕಾರಣ. ಇದರಿಂದ ವರ್ಣಸಂಕರವಾಗುತ್ತದೆ. ಈ ಯಾವ ಪಲ್ಲಟದಿಂದಲೂ ರಾಜ್ಯಾಧಿಪತ್ಯವೆ - ರಾಜತ್ವವೆ - ಅಪಾಯಕ್ಕೀಡಾಗುತ್ತದೆ. ಆದ್ದರಿಂದ ರಾಜ, ಜ್ಞಾನಾಧಿಪತಿ ಎಲ್ಲರೂ ಈ ಪುರಾತನ "ಕ್ಷೇಮವ್ಯವಸ್ಥೆ"ಯನ್ನು ಸಂರಕ್ಷಿಸಿಕೊಂಡೆ ಬಂದಿದ್ದರು. ಇದರ ಪರಿಣಾಮವಾಗಿಯೆ ಶಂಬೂಕನ ತಲೆಯನ್ನು ಬ್ರಾಹ್ಮಣ, ರಾಜನಾದ ಅವತಾರಿಯ ಕೈಯಲ್ಲೆ ತೆಗೆಸುತ್ತಾನೆ. ಬೇಡ ಏಕಲವ್ಯನ ಔತ್ತಮ್ಯವನ್ನು ಸಹಿಸದ ಕ್ಷತ್ರಿಯ ತನ್ನ ಬ್ರಾಹ್ಮಣ ಗುರುವೆ ಹೆಬ್ಬೆರಳ ಬಲಿಕೇಳುವಂತೆ ಮಾಡುತ್ತಾನೆ.

ಇಂಥ ತೀವ್ರ 'ಸೆಳೆತಕ್ಕೆ' ಕಟ್ಟಿಗೆ ಒಳಪಟ್ಟಿರುವ ಸಮಾಜವನ್ನು ಬಿಡಿಸುವುದು ಹೇಗೆ? ಧರ್ಮದಾನವನ್ನು ನೀಡದ ಧರ್ಮವನ್ನೇ ತ್ಯಜಿಸಿಬಿಡಬೇಕು; ವಿದ್ಯಾದಾನ ಮಾಡದ ಭಾಷೆಯನ್ನೆ ತಿರಸ್ಕರಿಸಿಬಿಡಬೇಕು. ಆತ್ಮೋದ್ಧಾರವನ್ನು ಒಪ್ಪದ ದೈವಗಳನ್ನೇ ಎಸೆದುಬಿಡಬೇಕು. ಆದ್ದರಿಂದಲೆ ಬಸವಣ್ಣನವರು ಸಂಸ್ಕೃತವನ್ನೆ ತ್ಯಜಿಸಿಬಿಟ್ಟರು. ವೈದಿಕ ಧರ್ಮವನ್ನೂ, ಆ ವರ್ಣಾಶ್ರಮ ಬದ್ಧದೇವತೆಗಳನ್ನೂ, ಕ್ಷುದ್ರಾಚಾರಕ್ಕೆ ಕಟ್ಟಿರುವ ಸಾಮಾನ್ಯರ ದೇವತೆಗಳನ್ನೂ ಅತ್ತ ಎಸೆದುಬಿಟ್ಟರು. ಈ ಎಲ್ಲ ಬಂಡಾಯಕ್ಕೂ ಧೈರ್ಯನಿಧಿಯಾಗಿರುವಂತೆ. ಆತ್ಮರಕ್ಷಕವಾಗಿರುವಂತೆ ಪ್ರತ್ಯಕ್ಷದೈವವೊಂದನ್ನು ನೀಡಿದರು. ಅದೆ ಲಿಂಗಲಾಂಛನ! ಈ ಇಷ್ಟಲಿಂಗ ಕೇವಲ ಪ್ರತ್ಯಕ್ಷ ದೈವ. ಅದರ ಮತ್ತು ಭಕ್ತನ ನಡುವೆ ಯಾವ ಮಧ್ಯವರ್ತಿ ಕೂಡಾ ಇಲ್ಲ. ಮಧ್ಯವರ್ತಿ-ಗುರುಜಂಗಮವಿನಾ-ಮತ್ತಾರು ಬಂದರೂ ಸಹಿಸಬಾರದು. ಮತ್ತೆ ಮಧ್ಯವರ್ತಿ ಹುಟ್ಟಿಕೊಂಡನೆಂದರೆ ದಳ್ಳಾಳಿ ಪ್ರಾರಂಭವಾಗುತ್ತದೆ. ಈ ವ್ಯಾಪಾರ ಬಂತೆಂದರೆ ಮತ್ತೆ ಎಲ್ಲ ಹಳೆಯ ಅನಾಚಾರ ಜಾತಿ ಪದ್ಧತಿ, ಪೂಜಾರಿ ವರ್ಗದ ನಿರ್ಮಾಣ ಆರಂಭಿಸುತ್ತದೆ. ಹೀಗೆಂದೆ ಬಸವಣ್ಣನವರು ದೇವಾಲಯತತ್ತ್ವವನ್ನು, ಅದು ಎಷ್ಟೆ ಶ್ರೇಷ್ಠವಾಗಿದ್ದರು ಖಂಡಿಸಿದರು. ಲಿಂಗಪೂಜೆಯಲ್ಲಿ ಅವರಿಗೆ ಮಾಹೇಶ್ವರ ಭಕ್ತಿಯಿದ್ದರೂ ಆ ಲಿಂಗವೂ ದೇವಾಲಯದಲ್ಲಿ ಸ್ಥಾವರವಾಗುಳಿಯಬಾರದೆಂದರು. ಹಾಗುಳಿದರೆ ಅದೂ ಹುಳಿಯುತ್ತದೆ. ಆಧ್ಯಾತ್ಮಿಕ ಸಾಧನೆಯೆಂಬುದು ಯಾರೊ ತಯಾರು ಮಾಡಿ ಎಲ್ಲರಿಗೂ ಹಂಚುವುದೆಂದಲ್ಲ. ದೇವಾಲಯ ಕಾರ್ಖಾನೆಯಾಗಬಾರದು. ಮಾಡುವ ಪ್ರತಿಯೊಂದು ಕರ್ಮದಲ್ಲೂ ಕಾಯಕತ್ವ ಬರಬೇಕು; ಆತ್ಮೀಯತೆ.ಸ್ವಸಂಬಂಧ ಭಾವನೆ ಬರಬೇಕು. ಹಾಗೆ ಭಾವ ಬಂದರೆ ಅದನ್ನು ತೀವ್ರಾಸಕ್ತಿಯಿಂದ ಮಾಡಬಹುದು. ಊಟಕೂಟಗಳನ್ನು ಅನ್ಯಮಧ್ಯವರ್ತಿಯಿದ್ದೆ ಮಾಡುತ್ತೇವೆಯೆ? ಹಾಗೆ ಭಕ್ತಿಯನ್ನಾದರೂ ತಿಳಿಯಬಾರದೆ? ಭಗವಂತಪತಿ-ಭಕ್ತಸತಿ ಸಂಬಂಧದಲ್ಲಿ ಈ ನೀತಿಯೆ ಇರಬೇಕಲ್ಲ? ಆದ್ದರಿಂದ ಸ್ಥಾವರ ಪೂಜೆ-ಅದು ಲಿಂಗವಾದರೂ-ಬೇಡ. ಮತ್ತೆ ಈ ಸ್ಥಾವರ ಪುಜೆ ಎಂದೂ ಕ್ಷೀಣಿಸುವಂತಹುದು; ಮಧ್ಯವರ್ತಿ ನಿರ್ಮಾಣಕ್ಕೆ

ಎಡೊಗೊಡುವಂತಹುದು. ಎಂದೇ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂದು ಘೋಷಿಸಿದರು. ಅವರ ಮನಸ್ಸು ಸ್ಥಿರತೆಯತ್ತಣಿಂದ ಜಂಗಮತೆಯಕಡೆ-ನಿರಂತರ ಕ್ರಾಂತಿಯಕಡೆ ಇತ್ತು. ಯಾವೊಂದು ಮಹಾತತ್ತ್ವವೂ ಸಾಂಸ್ಥಿಕವಾದುದಾದರೆ ಅದಕ್ಕೆ ದುರ್ಗತಿ ಒದಗುತ್ತದೆ ಎಂಬರಿವು ಅವರಿಗಿತ್ತು. ತಾವೇ ಹೇಳಿದ ಹೊಸ ಮೌಲ್ಯಗಳೂ ಕೂಡ ಸಂಸ್ಥೆಯಾಗಿ ರೂಪಾಂತರ ಹೊಂದಿದರೆ ಕೆಲವು ಕಾಲ ಹಾಗಾಗುವುದರಿಂದ ತಮ್ಮ ತತ್ತ್ವಗಳಿಗೆ ಒಂದು ಸಂಘಟನೆ ಬಂದಂತಾಗಬಹುದಾದರೂ ದೂರಕಾಲದಲ್ಲಿ ಅದು ಕೂಡ-ಅಳಿಯಬಹುದೆಂಬ ಎಚ್ಚರ ಅವರಿಗಿತ್ತೆಂಬಂತೆ ತೋರುತ್ತದೆ. ಯಾವ ಧರ್ಮವೆ ಆಗಲಿ ನಿತ್ಯ ಜಾಗೃತವಾಗಿರಬೇಕು. ಕೇವಲ ಅಭ್ಯಾಸಗತವಾಗದೆ ಜೀವಂತವಾಗಿರಬೇಕು ಎಂದು ಅವರಿಗನ್ನಿಸಿದ್ದಂತೆ ನನಗನ್ನಿಸುತ್ತದೆ.

ಅಂತೂ ಬಸವಣ್ಣನವರು ಪ್ರಾಯಶಃ ಪ್ರಥಮಬಾರಿಗೆ ಭಾರತೀಯ ಜಾತಿವ್ಯವಸ್ಥೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಒಡೆಯುತ್ತಾರೆ. ನಾಸ್ತಿಕರಂತೆ. ಚಾರ್ವಾಕರಂತೆ, ಅಥವಾ ವಿಮತೀಯರಂತೆ ಅಲ್ಲ; ಶಿವಮತೀಯರಂತೆ, ಆತ್ಮವಾದಿಗಳಂತೆ, ವಾಸ್ತವ ಪಾರಮಾರ್ಥಿಕ ಸಾಧಕರಂತೆ. ಬುದ್ಧ ಮಹಾವೀರರೆಲ್ಲ ಈ ಕೆಲಸವನ್ನು ಮಾಡಹೋದರೂ ಕೂಡ ಅವರು ಹಿಂದೂ ಧರ್ಮದಿಂದಲೆ ಸಿಡಿದು ಹೋದುದರಿಂದ ಅವರ ಸಾಧನೆ ದುರ್ಬಲವಾಯಿತು. (ಶ್ರೀ ಕುವೆಂಪು ಅವರು ಈ ಅಂಶವನ್ನೊಮ್ಮೆ ಮಾತನಾಡುವಾಗ ಸೂಚಿಸಿದರು) ಇತರ ಭಕ್ತಿಪಂಥಗಳು ಜಾತಿ ಪಂಥವನ್ನು ಗಣನೆಗೆ ತೆಗೆದುಕೊಳ್ಳದೆ ಭಾಗವತ ಪಂಥವನ್ನು ನಿರ್ಮಿಸ ಹೊರಟರೂ ಕೂಡ, ಹಳೆಯಜಾತಿಗಳನ್ನು ಒಡೆಯಲಾಗಲಿಲ್ಲ. ಒಬ್ಬೊಬ್ಬ ಭಕ್ತನೂ ಎಷ್ಟೆ ಭಾಗವತನಾದರೂ ಇಂತಿಂಥ ಜಾತಿಯವನೆಂದೆ ಉಳಿದ. ಪ್ರಾಯಶಃ ಅದಕ್ಕೆ ಕಾರಣ. ಆ ಯಾವ ಪಂಥವೂ ಕೇವಲ ಭಕ್ತಿಪಂಥವಾಗಿರುವುದರಲ್ಲಿ ತೃಪ್ತವಾಯಿತೇ ವಿನಾ ಸಾಮಾಜಿಕ ಧಾರ್ಮಿಕ ಕ್ರಾಂತಿಯನ್ನು ಸಾಧಿಸುವ ಕಡೆಗೆ ಗಮನವಿದ್ದಂತೆ, ಅಥವಾ ಅದು ಸಮರ್ಥವಾದ ತನ್ನದೇ ಆದ ವಿಶಿಷ್ಟ ಮೌಲ್ಯಗಳನ್ನು ಹೊಂದಿದ್ದಂತೆ ತೋರುವುದಿಲ್ಲ. ಅವರೇನಿದ್ದರೂ ಯಾವುದದಾರೂ ಒಂದು ಸುಲಭಲಭ್ಯವಾದ, ಸಮಕಾಲೀನವಾದ ಮತೀಯ ತಾತ್ವಿಕ ಮೌಲ್ಯವನ್ನು ಸ್ವೀಕರಿಸಿಕೊಂಡರು. ಮತ್ತೆ ಆ ಯಾವ ಭಕ್ತಿಪಂಥದವರೂ ತಮ್ಮದೆ ಆದ ಪ್ರಬಲ ಲಾಂಛನವನ್ನು - ಹಳತನ್ನು ಅಳಿಸಿ, ಹೊಸತಾಗಿ ರೂಪಿಸುವಂತಹ ಯಂತ್ರವನ್ನು ಕಲ್ಪಿಸಿಕೊಳ್ಳಲಿಲ್ಲ. ಇದರಿಂದ ಏನೇ ಒಳ್ಳೆಯದಿದ್ದಿರಬಹುದಾದರೂ ಜಾತಿವ್ಯವಸ್ಥೆಯನ್ನು ಒಡೆಯಲಾಗಲಿಲ್ಲ. ಲಿಂಗಲಾಂಛನವನ್ನು ಮಾಡದೆಯೆ ಬಸವಣ್ಣನವರು ಏನೆ ಮಾಡಿದ್ದರೂ ಮಾಚಯ್ಯ, ಮಾರಯ್ಯ, ಚೌಡಯ್ಯಾದಿಗಳ ಹಳೆಯ ಜಾತಿಯನ್ನು ಒಡೆದು ಅವರನ್ನೂ ಶಿವಮತಕ್ಕೆ ಸೇರಿಸಲು ಆಗುತ್ತಿತ್ತೆಂದು ಭಾವಿಸುವುದು ಕಷ್ಟವಾಗುತ್ತದೆ.

ಜಾತಿಗಳನ್ನು ಒಡೆದು, ಜಾತೀಯವಾದ ಭಯಂಕರ ದೈವಗಳನ್ನು ವಿಲೀನಗೊಳಿಸಿದರೂ ಅವರಿಗೆಲ್ಲ ವೃತ್ತಿ ತಪ್ಪದಂತೆ ನೋಡಿಕೊಳ್ಳುವುದು ಬಸವಣ್ಣನವರ ಸಮಸ್ಯೆಯಾಗುತ್ತದೆ. ಒಬ್ಬೊಬ್ಬ ವ್ಯಕ್ತಿಯೂ ಇಷ್ಟಲಿಂಗಧಾರಣ ಮಾಡಿರುವುದರಿಂದ ಸಾಧನೆಯ ದೃಷ್ಟಿಯಿಂದ ಸ್ವಯಂಪೂರ್ಣನಾಗಿರುವಂತೆ - ದೇವಾಲಯಾದಿ ಮಾಧ್ಯಮಗಳ ಅಧೀನನಾಗದಂತೆ - ಮಾಡಿದಂತೆಯೇ; ಆರ್ಥಿಕವಾಗಿಯೂ ಪರತಂತ್ರನಾಗದೆ ಸ್ವಯಂ ಉತ್ಪಾದಕನಾಗುವಂತೆ ಮಾಡುವ ಒಂದು ಮಾರ್ಗವನ್ನು ಬಸವಣ್ಣನವರು ಆರಸುತ್ತಾರೆ; ಕಾಯಕತತ್ತ್ವವನ್ನಾಗಿ ಕಾಣುತ್ತಾರೆ. ಈ ಕಾಯಕತತ್ತ್ವದ ಬಗೆಗೆ ಮೂಗುರಿಬರುವಷ್ಟು ಮಾತುಗಳಾಗಿದ್ದರೂ. ಈ ಪ್ರಬಂಧ ಸಮಗ್ರತೆಯ ದೃಷ್ಟಿಯಿಂದ ಅದನ್ನು ಕುರಿತು ಪುನರಾಲೋಚಿಸದಿದ್ದರೆ ದೋಷವಾಗುವ ಭೀತಿಯಿರುವುದರಿಂದ ಕೆಲವೊಂದು ಅಂಶಗಳು ಪುನರುಕ್ತಿಯಾದರೂ ಆ ಬಗೆಗೆ ಸಮಾಲೋಚನೆ ಮಾಡಬಯಸುತ್ತೇನೆ.

ಕಾಯಕ ಎಂದರೆ ಕೈಲಾಸವೆಂದು ಬಸವಣ್ಣನವರು ಭಾವಿಸಿದ್ದರೆಂದು ಹೇಳಿದರೂ ನಾವೂ ಅವರ ನಿಜವಾದ ಕಾಯಕ ಕಲ್ಪನೆ ಏನಿತ್ತೆಂದು ಕೆಲವೊಮ್ಮೆ ಗ್ರಹಿಸುವಲ್ಲಿ ತಪ್ಪುತ್ತೇವೆ. 'ಕಾಯಕವೆ ಕೈಲಾಸ' ಎಂದರೆ 'Work is worship' ಎಂದು ಹೇಳುವ ವಾಡಿಕೆಯುಂಟು. ಆದರೆ ಕಾಯಕವೆಂಬುದು ಬರಿಯ Work ಏನು? Work ಎಂಬುದು ಕಾಯಕವಾಗಲು ಏನೇನು ಪರಿಷ್ಕಾರ ಹೊಂದಬೇಕು ಎಂಬುದನ್ನು ಗಮನಿಸಬೇಕು. ಬರಿಯ ಕೆಲಸವೆ ಕೈಲಾಸವಾಗಬಹುದೇನೊ. ಆದರೆ ಬಸವಣ್ಣನವರು ಕೆಲಸವೂ ಕೂಡ ನೈವೇದ್ಯವಾಗಬೇಕು; ಬರಿಯ ಭಾವದಲ್ಲಲ್ಲ, ಭವದ ಅವಸ್ಥೆಯಲ್ಲಿಯೂ ಕೂಡ ಎಂದು ಭಾವಿಸುತ್ತಾರೆ. ಮೊದಲು ಕಾಯಕ ಎಂಬುದು ವ್ಯಕ್ತಿ ತಾನೆ, ಅನ್ಯ ಮಧ್ಯವರ್ತಿಗಳಿಂದ ಮಾಡಿಸದೆ, ತನ್ನ ಶರೀರ ಶ್ರಮದಿಂದಲೆ ಮಾಡುವ ಕೆಲಸ. ಊಟ ಕೂಟಗಳು ಹೇಗೊ, ಭಕ್ತಿಯೂ ಹಾಗೆಯೆ, ಕಾಯಕವೂ ಹಾಗೆಯೆ ತಾನೇ ಮಾಡಬೇಕಾದ ಕರ್ತವ್ಯ. ಈ ಕಾಯಕ ಯಾವುದಾಗಬೇಕು? ಹುಟ್ಟಿನಿಂದ ಬಂದದ್ದೆ? ತನ್ನ ಕೌಸಲಕ್ಕನುಗುಣವಾಗಿ ಬಂದದ್ದೆ? ವೃತ್ತಿಜಾತಿಯ ಮಾತೆ ಆಡಬಾರದ ಮೇಲೆ ಹುಟ್ಟಿನಿಂದ ಬಂದ ವೃತ್ತಿಯ





ಮಾತೆಲ್ಲಿ ಬಂತು? ಯಾವುದಾದರೂ ಕೆಲಸ ಮಾಡಲೇಬೇಕು. ನಾನು ಜ್ಞಾನಿ, ಭಕ್ತ, ಸಾಧಕ ಎಂದೇನೇ ಕಾರಣದಿಂದಲೂ ಕಾಯಕ ವಂಚನೆ ಮಾಡುವಂತಿಲ್ಲ. ಹಿಂದಿನ ಇತರ ಹಲವು ಪಂಥೀಯರು ಹಾಗೆ ಮಾಡಿದರು. ಆದರೆ ಇವರ ಪ್ರಕಾರ ತಾನು ಕೆಲಸ ಮಾಡಿದಲ್ಲದೆ ಉಣ್ಣುವ ಹಕ್ಕಿಲ್ಲ. ಲಿಂಗಪೂಜೆ, ಅನುಭಾವ ಕೂಟಗಳೇನೂ ಅನ್ನ ತರುವಂತಹ ಕೆಲಸಗಳಲ್ಲ; ಹಾಗೂ ಶರೀರಶ್ರಮದಿಂದ ಮಾಡಬೇಕಾದವೂ ಅಲ್ಲ. ಅನ್ನಕ್ಕಾಗಿ ಭಿಕ್ಷೆ ಬೇಡುವುದು ಲಿಂಗಕ್ಕೆ ಅಪಚಾರ. "ಹಾವತೋರಿ ಹವಿಯ ಬೇಡುವ" ಮೋಸವಾಗುತ್ತದೆ. ತಾನು ತಿರಿದು ಲಿಂಗವನ್ನೂ ತಿರಸುವುದು ಪಾಪ. ಹೊಟ್ಟೆಗೂ ವಂಚನೆಯ, ಅಗೌರವದ ದಾರಿ ಹಿಡಿಯಬೇಕಾಗಿ ಬಂದು ಆತ್ಮಗೌರವಕ್ಕೆ, ಲಾಂಛನಕ್ಕೆ, ನಿರ್ಭೀತಿಗೆ ಕುಂದುಂಟಾಗುತ್ತದೆ. ಸಮಾಜದ ಆರ್ಥಿಕ ವ್ಯವಸ್ಥೆಗೂ ಕೇಡುಂಟಾದೀತು. ಆದ್ದರಿಂದ ಪ್ರತಿಯೊಬ್ಬನೂ ತನ್ನ ಕೆಲಸವನ್ನು - ತನ್ನ ಕರಕೌಶಲವಿದ್ದ ಕೆಲಸವನ್ನು - ಬಿಡದೆ ತಾನೆ ಮಾಡಬೇಕು.

**"ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು!**
**ಹಾಸಿ ದುಡಿದರೆ ತನಗುಂಟು, ತನ್ನ ಪ್ರಮಥರಿಗುಂಟು!"**
**"ಕಾಯಕವೆಂದು ಕಾಯವ ಬಳಲಿಸದೆ, ತನುಕರಗದೆ, ಮನನೋಯದೆ**
**ಬೇಡಿ ಕಾಡಿ ಮಾಡುವುದು ದಾಸೋಹವೆ?**
**ಆವ ಕಾಯಕವಾದರೂ ಪ್ರಾಣವೇ ಕಡೆಯಾಗಿ ದ್ರವ್ಯಕಡೆಯಾಗಿ**
**ಚಿತ್ತಶುದ್ಧದಲ್ಲಿ ಬಂದುದಕ್ಕೆ ಸರಿಗಂಡು, ದೇಹಿಗಳಿಗೆ ಒಂದೇ ಪ್ರಮಾಣದಲ್ಲಿ**
**ಸರಿಗಂಡುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗಕ್ಕೆ ತೃಪ್ತಿ"**

**"ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು**
**ಕಾಯಕ ಸತ್ತು, ಹಣ ಹೊನ್ನು ಬೇಡಿಹೆನೆಂಬುದು ಕಷ್ಟವಲ್ಲವೆ ಸದ್ಭಕ್ತಂಗೆ?**
**ಈ ಗುಣ ಅಮರೇಶ್ವರ ಲಿಂಗಕ್ಕೆ ದೂರ"**

**"ಕೃಷಿಕೃತ್ಯ ಆವ ಕಾಯಕದಿಂದಾದೊಡೇನು? ತನು ಮನ ಬಳಲಿಸಿ ಗಳಿಸಿತಂದು, ಗುರುಲಿಂಗಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಪರಮಭಕ್ತನ ಪಾದವ ತೋರಯ್ಯ ನನಗೆ.... ಕೂಡಲ ಚೆನ್ನಸಂಗಮದೇವಾ."**

ನಮ್ಮ ದೇಶದಲ್ಲಿನ ವರ್ಗಸಮಸ್ಯೆ ಉಳಿದ ದೇಶಗಳಲ್ಲಿನದರಷ್ಟು ಸರಳವಲ್ಲ. ಕ್ರಿಶ್ಚಿಯನ್ ಮಹಮ್ಮದೀಯ ಅಥವಾ ಬೌದ್ಧರಿರುವ ಸಮಾಜದಲ್ಲಿ ವರ್ಗಗಳು ಮಾತ್ರವಿದ್ದರೆ, ನಮ್ಮಲ್ಲಿ ವರ್ಗ ಜಾತಿ ಇದೆ. ವರ್ಗ ಮೂರಾಗಬಹುದು ಆರಾಗಬಹುದು. ಆದರೆ ಜಾತಿ ಸಾವಿರಾರು. ಇಲ್ಲಿನ ಸಮಸ್ಯೆ ಈಗ ಹತ್ತಾರು ಸಾವಿರ. ಹಿಂದೆ ಸಮಸ್ಯೆಯೆ ಬರದಂತೆ ಜಾತಿ ಕುಲಾಚಾರಗಳ ಹೆಸರಿನಲ್ಲಿ ವರ್ಗೀಕರಿಸಿ ಭದ್ರಸ್ತರ ನಿರ್ಮಾಣ ಮಾಡಿದ್ದರಿಂದ ಆಗ ಯಾವ ವರ್ಗ ಜಾತಿ ಕಲಹವೂ ಆಗದಂತೆಯೆ ಇತ್ತು. ಒಂದು ಜಾತಿಯವನು ಮತ್ತೊಬ್ಬನ ವೃತ್ತಿಯನ್ನು ಅನುಕರಿಸುವುದಿರಲಿ ಬಯಸುವುದೂ ಅಪರಾಧವೆಂದಿದ್ದರಿಂದ ಸ್ತರ ಪಲ್ಲಟರಾಗುತ್ತಲೆ ಇರಲಿಲ್ಲ. ಹಾಗಾಗಿ ಆರ್ಥಿಕ ಗೊಂದಲವೂ ಇರಲಿಲ್ಲ. ಏಕೆಂದರೆ ಜಾಡಮಾಲಿ ವ್ಯಾಪಾರಿಯು ಜೊತೆ ಸ್ಪರ್ಧೆಯೂ ಮಾಡುವಂತಿರಲಿಲ್ಲ. ಪರಸ್ಪರ ಅಸೂಯೆಗೊಳ್ಳುವುದೂ ಸಾಧ್ಯವಿರಲಿಲ್ಲ. ಅಂದಮೇಲೆ ಬಡತನ ಸಿರಿತನಗಳ ಘರ್ಷಣೆಗೂ ಎಡೆಯಿರಲಿಲ್ಲ. ಏಕೆಂದರೆ ಬಡತನ ಸಿರಿತನ= ಮೇಲು ಕೀಳು ಜಾತಿ ಎಂಬುದೆಲ್ಲ ಕರ್ಮಫಲ, ಅಥವಾ ದೇವರಿಚ್ಛೆ; ಆದ್ದರಿಂದ ಅನುಲ್ಲಂಘ್ಯ ಎಂಬ ಭಾವವಿತ್ತು. ಇದರಿಂದ ನಮ್ಮಲ್ಲಿ ಹಿಂದೆ ಜಾತಿವ್ಯವಸ್ಥೆ ವರ್ಗೀಕೃತ ಅರ್ಥವ್ಯವಸ್ಥೆಯೂ ಆಯಿತು. ಇವು ಬೇರೆಡೆ ಹೀಗಿರಲಿಲ್ಲ. ಯಾವ ವೃತ್ತಿ ಯಾರೂ ಮಾಡಬಹುದು. ಆಂದರೆ ಯಾರೂ ಶ್ರೀಮಂತ ಗಣ್ಯ ಆಗಬಹುದಿತ್ತು. ಎಂತಲೆ ಸ್ಪರ್ಧೆ ಇತ್ತು; ವರ್ಗಕಲಹ ಇತ್ತು. ನಮ್ಮಲ್ಲಿ ಜಾತಿ ಕಲಹ ಸಾಧ್ಯವಿಲ್ಲದ್ದರಿಂದ ವರ್ಗಕಲಹವೆ ಆಗದಾಯಿತು. ಯಾರಾದರೂ ಉದಾರಿ ಬಂದು ಕೀಳು ಜಾತಿಯವನಿಗೆ ಜ್ಞಾನವಿತ್ತು ಉದ್ಧಾರ ಮಾಡ ಹೊರಟಿದ್ದರೆ ಆತ ಬರಿ ಅದಷ್ಟನ್ನೆ ಮಾಡಿದಂತೆ ಆಗುತ್ತಿರಲಿಲ್ಲ. ಇಡಿ ವರ್ಗವ್ಯವಸ್ಥೆಯನ್ನೆ ಅಲುಗಿಸಿದಂತಾಗುತ್ತಿತ್ತು. ಅದಕ್ಕೆ ಸರ್ವ ವಿರೋಧವೆದ್ದು ಯಾರೂ ಬೃಹತ್ ಪ್ರಮಾಣದ ಕ್ರಾಂತಿಗೆ ತೊಡಗುತ್ತಲೆ ಇರಲಿಲ್ಲ. ಬಸವಣ್ಣನವರು ಇಂತಹ ಕ್ರಾಂತಿ ನಡೆಸುತ್ತಾರೆ; ವರ್ಗವನ್ನೂ ಜಾತಿಯನ್ನೂ ಒಂದೆ ಬಾರಿಗೆ ಹಿಡಿದಲುಗಿಸುತ್ತಾರೆ. ಬಡವ ಬಲ್ಲಿದರನ್ನು, ಉತ್ಪಾದಕ ಅನುತ್ಪಾದಕರನ್ನು, ಕೀಳು ಮೇಲನ್ನು ಬರಿದೆ ಮಾರಕ ಘರ್ಷಣೆಗೀಡುಮಾಡದೆ ಒಂದೆಡೆಗೆ ಕೂಡಿಸಿ ಸಮರಸಗೊಳಿಸುತ್ತಾರೆ. ಹಿಂದೆ ವೃತ್ತಿ 'ಸಂಪತ್ಕಾರಕವಾಗಿ' ವರ್ಗ ಜಾತಿ ಶ್ರೇಣಿ ನಿರ್ಧಾರಕವಾಗಿ ಇದ್ದಿದ್ದರೆ, ಇವರು ಆ ವೃತ್ತಿಯನ್ನೆ ಕಾಯಕ ಮಾಡಿ ವರ್ಗಜಾತಿ ದೂರವಾಗುವಂತೆ ಮಾಡುತ್ತಾರೆ. ವೃತ್ತಿ ಒಬ್ಬನಿಗೆ ಹೆಚ್ಚು ಹಣ, ಮತ್ತೊಬ್ಬನಿಗೆ ಕಡಿಮೆ ಹಣ ತಂದಾಗ ತಾನೆ ದೂರು? ಹಾಗೂ. ಆ ವೃತ್ತಿ ಒಬ್ಬನನ್ನು ಗಣ್ಯ ಮತ್ತೊಬ್ಬನನ್ನು ನಗಣ್ಯನನ್ನಾಗಿ ಮಾಡಿದರ ತಾನೆ ತೊಂದರೆ? ಅದಾಗದ ಹಾಗೆ ಇವರು ಕಾಯಕ ವ್ಯವಸ್ಥೆ ಮಾಡುತ್ತಾರೆ.

(ಮುಂದುವರಿಯುತ್ತದೆ.)

# ವಚನಕಾರರು ಕಂಡ ಬಸವಣ್ಣ

- ಎನ್. ಆರ್. ಪಾಟೀಲ್
ಹೊಸಪೇಟೆ

ಮಹಾ ಮಾನವತಾವಾದಿಯಾಗಿದ್ದ ಬಸವಣ್ಣ, ಒಬ್ಬ ಕ್ರಾಂತಿಕಾರಿ ವ್ಯಕ್ತಿಯೂ ಹೌದು. ಈ ನಾಡಿನ ಆಧ್ಯಾತ್ಮದ ಮೌಲ್ಯಗಳನ್ನು ಪುನರುಜ್ಜೀವನಗೊಳಿಸಿ, ಜನಸಾಮಾನ್ಯರಿಗೂ ಅರ್ಥವಾಗುವಂತೆ ಸರಳೀಕರಿಸಿದ ಮಹಾನ್ ಪುರುಷ ಬಸವಣ್ಣ. ಅವರು ಈ ಕಾರ್ಯಕ್ಕೆ ಬಹುಪಾಲು ಜನರಾಡುವ, ಜನಸಾಮಾನ್ಯನ ಭಾಷೆಯಾದ ಕನ್ನಡವನ್ನೇ ಆಯ್ದುಕೊಂಡರು. ಈ ದಿಶೆಯಲ್ಲಿ ಅವರಿಗೂ ಮಹಾನ್ ಧರ್ಮ ಪ್ರವರ್ತಕ ಗೌತಮ ಬುದ್ಧರಿಗೂ ಸಾಮ್ಯವಿದೆ. ಬುದ್ಧನು ತನ್ನ ಧರ್ಮಕಾರ್ಯಕ್ಕೆ ಸಂಸ್ಕೃತಕ್ಕೆ ಬದಲಾಗಿ ಸರ್ವರಿಗೂ ಅರ್ಥವಾಗುವ 'ಪಾಳಿಯ' ಭಾಷೆಯನ್ನೇ ಬಳಸಿಕೊಂಡದ್ದೊಂದು ವಿಶೇಷ. ಬಸವಣ್ಣನವರೂ ಬುದ್ಧನಂತೆ ಜಾತಿ ಪದ್ಧತಿಯನ್ನು ನಿರ್ಮೂಲನ ಮಾಡಲು ಶ್ರಮಿಸಿದರು. ಇಂಥಹ ಮಹಾನ್ ಆತ್ಮ ಸರಳ ಜೀವಿಯಾದ ಬಸವಣ್ಣನವರಿಗೆ ವಚನಕಾರರಲ್ಲೊಂದು ವಿಶಿಷ್ಟ ಸ್ಥಾನವಿದೆ. ಬಸವಣ್ಣನ ಸಮಕಾಲೀನ ವಚನಕಾರರು ಬಸವಪಥಕ್ಕೆ ಮಾರುಹೋಗಿದ್ದರು; ಬಸವ ಬೆಳಗಿನಲ್ಲಿ ಜೀವನಪಥ ಕಂಡುಕೊಂಡಿದ್ದರು; ಬಸವ ಭಕ್ತಿಯಲ್ಲಿ ಬದುಕು ಸವೆಸಿದ್ದರು; ಪೂಜ್ಯಭಾವನೆ ಹೊಂದಿದ್ದರು. ಬಸವಣ್ಣನವರೂ ಕೂಡ ತನ್ನ ಸಮಕಾಲೀನ ಶರಣರನ್ನೆಂದೂ ಕೀಳಾಗಿ ಕಂಡವರಲ್ಲ. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಮನಸ್ಸು ಅವರದು. ಬಿಜ್ಜಳನ ಭಂಡಾರವನ್ನೇ ತ್ಯಜಿಸಿ ಜನಸಾಮಾನ್ಯರ ಮಧ್ಯ ಬಂದು ಸಮಾಜ ಸುಧಾರಣೆಗೆ ಶ್ರಮಿಸಿದ ಬಸವಣ್ಣನವರನ್ನು ವಚನಕಾರರು ತುಂಬ ಭಯಭಕ್ತಿಯಿಂದ ಕಾಣುತ್ತಿದ್ದರು. ಬಸವ ವ್ಯಕ್ತಿತ್ವವನ್ನು ಹೊಗಳುತ್ತ ಶರಣರಿಗೆಲ್ಲ ಗುರುಸ್ಥಾನದಲ್ಲಿ ಅಲ್ಲಮಪ್ರಭುಗಳು ಹೇಳುತ್ತಾರೆ --

**"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ
ಜ್ಯೋತಿಯ ಮುಟ್ಟಿಸಲು
ತೊಳಗಿ ಬೆಳಗುತ್ತಿರ್ದುಡಯ್ಯಾ ಶಿವನ ಪ್ರಕಾಶ !
ಆ ಬೆಳಗಿನೊಳಗೊಪ್ಪುತಿರ್ದರಯ್ಯ
ಅಸಂಖ್ಯಾತ ಭಕ್ತ ಮಹಾಗಣಂಗಳು !
ಶಿವಭಕ್ತರಿರ್ದ ಕ್ಷೇತ್ರ ಪಾವನವೆಂಬುದು ಹುಸಿಯೆ?
ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವನ
ಕಂಡು ಬದುಕಿದೆ ಕಾಣಾಸಿದ್ಧರಾಮಯ್ಯ"**

ಪ್ರಭುಗಳ ಈ ಮಾತು ಬಸವ ವ್ಯಕ್ತಿತ್ವಕ್ಕೆ ಹಿಡಿದ ನಿಚ್ಚಳ ಕನ್ನಡಿಯಾಗಿದೆ. ಕಲ್ಯಾಣಕ್ಕೆ ಬಸವಣ್ಣನೇ ಜ್ಯೋತಿ. ಈ ಜ್ಯೋತಿಯಿಂದಲೇ ಶಿವನ ಪ್ರಕಾಶ ಎನ್ನುತ್ತಾರೆ ಅಲ್ಲಮರು. ಬಸವ ಜ್ಯೋತಿಯಿಂದ ಉರಿವ ಶಿವನಪ್ರಕಾಶದಲ್ಲಿ ಅನೇಕ ಭಕ್ತರು ತಮ್ಮತ್ರನವನ್ನು ಕಂಡುಕೊಳ್ಳುತ್ತಿದ್ದಾರೆ ಎಂಬ ಭಾವದಲ್ಲಿ ಬಸವ ವ್ಯಕ್ತಿತ್ವದ ವೈಶಾಲ್ಯತೆಯ ಅರಿವಾಗುತ್ತದೆ. ಮುಂದುವರೆದು ಗುರುಗಳು ಹೇಳುತ್ತಾರೆ ---

**"ಕುಂಡಲಿಗನ ಕೀಟಕನಂತೆ ಮೈಮಣ್ಣಾದಂತೆ
ಇದ್ದೆಯಲ್ಲ ಬಸವಣ್ಣ
ಜಲದೊಳಗಣ ತಾವರೆಯಂತೆ ಹೊದ್ದಿಹೊದ್ದದಂತೆ
ಇದ್ದೆಯಲ್ಲ ಬಸವಣ್ಣ
ಜಲದಿಂದಾದ ಮೌಕ್ತಿಕದಂತೆ ಒಲವು ತಾನಾಗದಂತಿದ್ದೆಯಲ್ಲ ಬಸವಣ್ಣ
ಗುಹೇಶ್ವರ ಲಿಂಗದಾಣತಿವಿಡಿದು ತನುಗುಣಮತ್ತರಾಗಿದ್ದ
ಐಶ್ವರ್ಯಾಂಧಕರ ಮತವನ್ನೇನ ಮಾಡಿ ಬಂದೆಯ್ಯ
ಸಂಗನ ಬಸವಣ್ಣ?"**

ಬಸವಣ್ಣನಿಗೆ ತನ್ನ ದೇಹವನ್ನೇ ಅರ್ಪಿಸಿದೆ ಎನ್ನುತ್ತ ಅಲ್ಲಮರು ಹೇಳುತ್ತಾರೆ ;

**"ಯನ್ನ ಕಾಯವ ಬಸವಣ್ಣನಳವಡಿಸಿಕೊಂಡ
ಯನ್ನ ಮನವ ಚೆನ್ನಬಸವಣ್ಣನಳವಡಿಸಿಕೊಂಡ
ಯನ್ನ ಭಾವವ ಮಡಿವಾಳನಳವಡಿಸಿಕೊಂಡ
ಇಂತೀ ಮೂವರು ಒಂದೊಂದಳವಡಿಸಿಕೊಂಡ ಕಾರಣ ಗುಹೇಶ್ವರ
ನಿಮ್ಮ ಶರಣರೆಂಬ ತ್ರೈಮೂರ್ತಿಗಳಿಗೆ
ನಮೋ ನಮೋ ಎನುತಿರ್ದೆನು"**

ಬಸವಣ್ಣನವರ ಸಮಕಾಲೀನ ಹಾಗೂ ಹಿರಿಯ ವಚನಕಾರ ಮಡಿವಾಳ ಮಾಚಯ್ಯ, ನಿರ್ಭಿಡೆಯ ವ್ಯಕ್ತಿ, ವೀರವಚನಕಾರ, ನಿರ್ದಾಕ್ಷಿಣ್ಯ ಸ್ವಭಾವ. ವೀರಶೈವ ಧರ್ಮಕ್ಕೆ ವೀರನಿಷ್ಠೆ ತಂದುಕೊಟ್ಟ ಧೀಮಂತ. ಮಡಿವಾಳ ಮಾಚಯ್ಯನಿಗೆ





ಬಸವನೆಂದರೆ ತುಂಬ ಪ್ರೀತಿ, ಗೌರವ, ಅಭಿಮಾನ. ಬಸವಣ್ಣನವರೂ ಸಹ ಮಾಚಯ್ಯನವರನ್ನು ತುಂಬ ಗೌರವಪೂರ್ವಕವಾಗಿ ಕಾಣುತ್ತಿದ್ದರು. ಮಾಚಯ್ಯ ಬಸವಣ್ಣನವರನ್ನು ಹೀಗೆ ಕೊಂಡಾಡುತ್ತಾನೆ --

**"ಎತ್ತೆತ್ತ ನೋಡಿದರೆ ಬಸವನೆಂಬ ಬಳ್ಳಿ,
ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದೊಡೆ ಭಕ್ತಿ ಎಂಬ ರಸವಯ್ಯ"**



ಬಸವಪಥ ಮಾಚಯ್ಯನ ಬಾಳಿಗೆ ಮಾರ್ಗದರ್ಶಕವಾಗಿತ್ತು. ಬಹಳಷ್ಟು ವಿಷಯಗಳನ್ನು ಅವನು ಬಸವಣ್ಣನವರಿಂದಲೇ ತಿಳಿದುಕೊಂಡಿದ್ದ. ಅಂಥವುಗಳಲ್ಲಿ ಅಕ್ಕಮಹಾದೇವಿಯ ನಿಲುವೂ ಒಂದು. ಪತಿ ರಾಜನನ್ನು ಧಿಕ್ಕರಿಸಿ ವೈಭವಯುತ ಅರಮನೆಯನ್ನು ತೊರೆದು, ಉಟ್ಟ ಬಟ್ಟೆಯನ್ನೇ ಬಿಸಾಕಿ ಕೇಶರಾಶಿಗಳಿಂದ ಮೈಮುಚ್ಚಿಕೊಂಡು ಬಂದು ಅನುಭವ ಮಂಟಪವನ್ನು ಪ್ರವೇಶಿಸಿದ ಅಕ್ಕಮಹಾದೇವಿ ಬಹಳಷ್ಟು ಶರಣರಿಗೆ ಒಗಟಾಗಿಯೇ ತೋರುತ್ತಾಳೆ. ಮಾಚಯ್ಯನೂ ಅಕ್ಕಮಹಾದೇವಿಯ ಪರಿಯನ್ನು ಅರಿಯದೇ ಹೋಗುತ್ತಾನೆ. ಅಕ್ಕಮಹಾದೇವಿಯ ನಿಲುವನ್ನು ಅರಿಯಲು ಮಾಚಯ್ಯನಿಗೆ ಬಸವಣ್ಣನವರೇ ಬೇಕಾಗುತ್ತದೆ;

**"ಕಾಮಿಯಾಗಿ ನಿಃಕಾಮಿಯಾದಳು
ಸೀಮೆಯಲ್ಲಿರ್ದು ನಿಸ್ಸೀಮೆಯಾದಳು
ಭವಿಯ ಸಂಗವ ತೊರೆದು ಭವಬಾಧೆಯ ಹರಿದಳು
ಬಸವಣ್ಣ ಗತಿ ಎಂದು ಬರಲು ನಾನು ಮಡಿಯ ಹಾಸಿ ನಡೆಸಿದೆನು
ನಾ ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು
ಆ ಮಡಿಯ ಬೆಳಗಿನ ಬೆಳಗಿನೊಳಗೆ ನಿರ್ವಯಲಾದಳು
ಕಲಿದೇವಾ ಮಹಾದೇವಿಯಕ್ಕಗಳ ನಿಲುವ ಬಸವಣ್ಣನ
ಕೃಪೆಯಿಂದಲರಿದೆನಯ್ಯ"**

ಬಸವಣ್ಣನ ಸಮಕಾಲೀನ ಎಲ್ಲ ವಚನಕಾರರೂ ಬಸವಣ್ಣನ ಬಗೆಗೆ ಗೌರವ ಹಾಗೂ ಪೂಜ್ಯಭಾವನೆ ಹೊಂದಿದ್ದರು. ಶರಣರಿಗೆ ಗುರುಸ್ಥಾನದಲ್ಲಿಟ್ಟ ಅಲ್ಲಮಪ್ರಭು, ವೀರಶೈವ ಧರ್ಮಕ್ಕೆ ತಾತ್ವಿಕ ನೆಲೆಗಟ್ಟನ್ನು ಒದಗಿಸಿಕೊಟ್ಟ ಚನ್ನಬಸವಣ್ಣ, ಮಹಾಕರ್ಮಯೋಗಿ ಸಿದ್ಧರಾಮ ಈ ಮೂವರೂ ಬಸವ ವ್ಯಕ್ತಿತ್ವದ ಬಗೆಗೆ ಗೌರವ ಭಾವನೆ ಹೊಂದಿದ್ದರು. ಅಲ್ಲದೇ ಅಂಬಿಗರ ಚೌಡಯ್ಯ, ಸಕಳೇಶ ಮಾದರಸ, ಮೋಳಿಗೆ ಮಾರಯ್ಯ, ಕಿನ್ನರಿ ಬೊಮ್ಮಯ್ಯ, ಹಡಪದ ಅಪ್ಪಣ್ಣ, ಉರಿಲಿಂಗದೇವ, ವಚನ ಭಂಡಾರಿ ಶಾಂತರಸ, ಆಯ್ದಕ್ಕಿ ಮಾರಯ್ಯ ಮುಂತಾದವರು ಬಸವಣ್ಣನವರನ್ನು ಭಯಭಕ್ತಿಯಿಂದ ಕಾಣುತ್ತಿದ್ದರು. ಮೋಳಿಗೆ ಮಾರಯ್ಯ ಬಸವಣ್ಣನವರ ಭಕ್ತಿಗೆ ಮಾರುಹೋಗಿ, ಕಾಶ್ಮೀರದಲ್ಲಿಯ ರಾಜತ್ವವನ್ನು ಬಿಟ್ಟುಕೊಟ್ಟು ಸತಿಸಮೇತರಾಗಿ ಕಲ್ಯಾಣಕ್ಕೆ ಬಂದವರು. ಈ ಮಾರಯ್ಯ ಬಸವಣ್ಣನವರ ಮನೆಯಲ್ಲಿ ಹಾಳಾಗಿ ಬಿದ್ದಿದ್ದ ಅಕ್ಕಿಯನ್ನು ಆಯ್ದು ಜಂಗಮ ಸಂತರ್ಪಣೆ ನಡೆಸುತ್ತಿದ್ದರು.

ವಚನ ಸಾಹಿತ್ಯದಲ್ಲಿ ವಚನಕಾರ್ತಿಯರಿಗೂ ಮಹತ್ವದ ಸ್ಥಾನ ಸಲ್ಲುತ್ತದೆ. ಅಕ್ಕಮಹಾದೇವಿ ಹಾಗೂ ಮುಕ್ತಾಯಕ್ಕರನ್ನು ಬಿಟ್ಟರೆ ಉಳಿದ ಎಲ್ಲ ವಚನಕಾರ್ತಿಯರಿಗೆ ಬಸವಣ್ಣನೇ ಕೇಂದ್ರಬಿಂದುವಾಗಿದ್ದ ಎಂಬುದು ಗಮನಾರ್ಹ. ಅವರು ಬಸವಪಥದಲ್ಲಿಯೇ ನಡೆಯಲು ಹಾಗೂ ವಚನಗಳನ್ನು ರಚಿಸಲು ಮುಂದಾಗಿದ್ದಾರೆ. ಬಸವನಿಂದ ಪ್ರೇರಣೆ ಪಡೆದು ಶರಣ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಗಳನ್ನು ನೀಡಿದ್ದಾರೆ. ಈ ವಚನಕಾರ್ತಿಯರ ಗಂಡಂದಿರಿಗೂ ಬಸವಣ್ಣರೇ ಮಾರ್ಗದರ್ಶಕರಾಗಿದ್ದರು. ಇವರೆಲ್ಲರ ಮೆಚ್ಚುಗೆಯನ್ನು ಬಸವಣ್ಣ ಗಳಿಸಿಕೊಂಡಿರುವುದಕ್ಕೆ ಪ್ರಮುಖ ಕಾರಣ - "ಬಸವಪಥದ ಸರಳತೆ" ಬಸವಣ್ಣನ ಬದುಕಿನ ಅತ್ಯಂತ ಕಠಿಣ ವಿಷಯಗಳನ್ನೂ ತುಂಬ ಸರಳ ಹಾಗೂ ಸುಲಲಿತವಾಗಿ ಮನಸೂರೆಗೊಳ್ಳುವಂತೆ ಹೇಳುತ್ತಿದ್ದರು. ಅದೇ ಅಕ್ಕ ಹಾಗೂ ಅಲ್ಲಮಪ್ರಭುಗಳ ಮಾರ್ಗ

ಅಷ್ಟು ಸರಳವಲ್ಲ. ಅರ್ಥಮಾಡಿಕೊಳ್ಳಲಿಕ್ಕೂ ತುಂಬ ಕಠಿಣ. ಅದಕ್ಕೆ ವಚನಕಾರ್ತಿಯರು ಬಸವಪಥವನ್ನೇ ತುಳಿದರು. ಇವರಿಗೆಲ್ಲ ಬಸವಣ್ಣ ಹೆಚ್ಚು ಕಡಿಮೆ ಆರಾಧ್ಯ ದೇವನಾಗಿಯೇಬಿಟ್ಟಿದ್ದ. ಬಸವ ವ್ಯಕ್ತಿತ್ವಕ್ಕೆ ಮಾರುಹೋಗಿ, ಬಸವ ಬೆಳಗಿನಲ್ಲಿಯೇ ತನ್ನ ಬಾಳಪಥ ಕಂಡುಕೊಂಡ ನೀಲಮ್ಮ ಬಸವನ ಹೆಂಡತಿ ಮಿಗಿಲಾಗಿ ವಚನಕಾರ್ತಿ. ಸಿದ್ಧರಸನ ಮಗಳಾಗಿ ಬಿಜ್ಜಳನೊಂದಿಗೆ ಅರಮನೆಯಲ್ಲಿ ಬೆಳೆದ ನೀಲಮ್ಮಳಿಗೆ ನೀಲಾಂಬಿಕೆ, ನೀಲಲೋಚನೆ ಎಂದೂ ಹೆಸರುಗಳಿವೆ. ನೀಲಮ್ಮನ ಪಾಲಿನ ದೇವ ಬಸವಣ್ಣ, ಇದನ್ನು ಅವಳು ತನ್ನ ಪ್ರತಿ ವಚನದಲ್ಲಿ ತೋರಿದ್ದಾಳೆ --

**ಯನಗೆ ಲಿಂಗವು ನೀವೇ ಬಸವಯ್ಯ**
**ಯನಗೆ ಸಂಗವು ನೀವೇ ಬಸವಯ್ಯ**
**ಯನಗೆ ಪ್ರಾಣವು ನೀವೇ ಬಸವಯ್ಯ**
**ಯನಗೆ ಪ್ರಸಾದವು ನೀವೇ ಬಸವಯ್ಯ**
**ಯನಗೆ ಪ್ರಭೆಯ ಮೂರ್ತಿಯು ನೀವೇ ಬಸವಯ್ಯ**
**ಯನಗೆ ಸಂಗಯ್ಯನು ನೀವೇ ಬಸವಯ್ಯ**

ನೀಲಮ್ಮಳಿಗೆ ಬಸವಣ್ಣ ಕೇವಲ ಗಂಡನಾಗಿರಲಿಲ್ಲ. ಅವಳ ಬದುಕಿಗೆ ಬೆಳಕಾಗಿದ್ದ -

**"ಬೆಳಗಿನ ಪ್ರಭೆ ಥಳಥಳಿಸಿ ಹೊಳೆಯಲು,**
**ಬೆಳಗಿನೊಳಗೆ ಬೆಳೆದ ಶಿಶುವಾನಯ್ಯ,**
**ಕಳಿಯರಿಯದೇ ಬೆಳೆದನು ತಿಳುಹಿಲ್ಲದೆ ನಿಂನೆನು,**
**ಸಂಗಯ್ಯನಲ್ಲಿ ಬಸವಾ ಬಸವಾ ಬಸವಾ ಎನ್ನುದಿದ್ದೆನಯ್ಯ"**

ಬಸವ ವ್ಯಕ್ತಿತ್ವದ ಬಗೆಗೆ ಹೇಳುತ್ತಾ ನಿಲಮ್ಮ ಹೇಳುತ್ತಾಳೆ

**"ಬಸವಾ ಬಸವಾ ಬಸವಾ ಎಂಬ ಶಬ್ದವಡಗಿತ್ತು**
**ಬಸವಾ ಬಸವಾ ಬಸವಾ ಎಂಬ ರೂಪ ನಿರೂಪವಾಯಿತ್ತು**
**ಬಸವನ ಕಾಯವಳಿದು ನಿರಾಳವಾಗಲು**
**ಅನು ಬಸವಾ ಬಸವಾ ಎಂದು ಬಯಲಾದೆನಯ್ಯ ಸಂಗಯ್ಯ"**

ಈ ತೆರನಾಗಿ ಬಸವನಲ್ಲಿಯೇ ಸಂಗಯ್ಯನನ್ನು ಕಂಡ ನೀಲಮ್ಮ "ಸಂಗಯ್ಯನಿಕ್ಕಿದ ದಿಬ್ಬವ ಮೀರದೇ ಬಸವನೊಳಗಾ ನಡಗಿದೆ..." ಎಂದು ಹೇಳುತ್ತ "ನಾನು ಬಸವಯ್ಯನ ಮನೆಯ ತೊತ್ತಿನ ಮಗಳು" ಎಂದಿದ್ದಾಳೆ. ನೀಲಮ್ಮಳಂತೇ ಬಸವಣ್ಣನನ್ನು ಅತಿಯಾಗಿ ಮೆಚ್ಚಿಕೊಂಡ ಇನ್ನೊಬ್ಬ ವಚನಕಾರ್ತಿ ಅಕ್ಕನಾಗಮ್ಮ-

**"ಬಸವಣ್ಣಾ, ನೀವು ಮರ್ತ್ಯಕ್ಕೆ ನಿಂದಡೆ**
**ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಲ್ಲಾ**
**ಅಯ್ಯಾ, ಸ್ವರ್ಗ, ಮರ್ತ್ಯ ಪಾತಾಳದೊಳಗೆಲ್ಲಾ**
**ನಿಮ್ಮ ಭಕ್ತಿಯ ಬೆಳವಿಗೆಯ ಘನಮಾರುಬಲ್ಲರು**
**ಅಣ್ಣಾ, ಶಶಿಧರನಟ್ಟಿದ ಮಣಿಹ ಪೂರೈಯಿಸಿತೆಂದು**
**ನೀವು ಲಿಂಗೈಕ್ಯವಾದೊಡೆ**
**ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ**
**ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ**
**ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತಲ್ಲಾ ಬಸವಣ್ಣ**
**ಎನ್ನನೊಯ್ಯದೇ ಹೋದೆಯಲ್ಲಾ**
**ಪಂಚಪರುಷಮೂರ್ತಿ ಬಸವಣ್ಣಾ!**
**ಬಸವಣ್ಣಪ್ರಿಯ ಚನ್ನಸಂಗಯ್ಯನಿಗೆ**
**ಪ್ರಾಣಲಿಂಗವಾಗಿ ಹೋದೆಯಲ್ಲ ಸಂಗನ ಬಸವಣ್ಣಾ"**

ಈ ವಚನದಲ್ಲಿ ವಚನಗಾರ್ತಿ ಶರಣೆ ಅಕ್ಕಮ್ಮ ಬಸವ ವ್ಯಕ್ತಿತ್ವವನ್ನು ಕೊಂಡಾಡುವುದರ ಜೊತೆಗೆ, ಬಸವ ಬಯಲಾದಾಗ ವೀರಶೈವ ಧರ್ಮ, ಭೂಲೋಕ ಅನಾಥವಾದ ಬಗೆಯನ್ನು ಬಣ್ಣಿಸಿದ್ದಾಳೆ. ಇದೇ ತೆರನಾಗಿ ಬಸವಣ್ಣನವರನ್ನು ಕಳಕೊಂಡ ನೀಲಮ್ಮಳೂ ಹಲುಬುತ್ತಾಳೆ --

**"ಅಟ್ಟಡವಿಯಲ್ಲಿ ಬಿಟ್ಟುಹೋದಿರಿ ಬಸವಾ**
**ನಟ್ಟನಡುಗ್ರಾಮವ ಕೆಡಿಸಿ ಹೋದಿರಿ ಬಸವಾ**
**ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಾ**
**ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಾ"**

ಇದು ಕೇವಲ ನೀಲಮ್ಮಳ ದುಃಖವಲ್ಲ. ಅದು ಬಸವಣ್ಣನವರು ಲಿಂಗೈಕ್ಯವಾದ ಬಳಿಕ ೧೨ನೇ ಶತಮಾನದ ಆಂದೋಲನದ ಅಳಿವು ಹಟಾತ್ತನೆ ಬಂದೆರಗಿದ ಅಂತ್ಯವನ್ನು ಹಾಗೂ ಸಮಾಜದ ಗೋಳನ್ನು ಚಿತ್ರಿಸುತ್ತದೆ.

ಹೀಗೆ ಬಸವಣ್ಣ ವಚನಕಾರರಿಗೆ, ವಚನಕಾರ್ತಿಯರಿಗೆ ಗೌರವ, ಅಭಿಮಾನ, ಪೂಜನೀಯ ವ್ಯಕ್ತಿಯಾಗಿದ್ದರು. ಅವರು ಬಸವಣ್ಣನರನ್ನು ತುಂಬು ಹೃದಯದಿಂದ ಹೊಗಳಿದ್ದಾರೆ; ನೆಚ್ಚಿಕೊಂಡಿದ್ದಾರೆ; ಬಸವಪಥದಲ್ಲಿಯೇ ಮುನ್ನಡೆದಿದ್ದಾರೆ.

*(ಕೃಪೆ : ಬಸವಪಥ)*

**ವಿದ್ಯೆಯಿಂದ ಮನುಷ್ಯನ ತೇಜಸ್ಸು ಹೆಚ್ಚುತ್ತದೆ. ವಿದ್ಯೆಯು ಅಪಹರಿಸಲಾಗದ ಐಶ್ವರ್ಯ. ವಿದ್ಯೆಯಿಂದಲೇ ಯಶಸ್ಸು, ಸುಖ. ವಿದ್ಯೆ ಗುರುವಿನ ಗುರು. ವಿದ್ಯೆ ವಿದೇಶದಲ್ಲೂ ಬಂಧು. ವಿದ್ಯೆಯೇ ಪರದೇವತೆ, ರಾಜಪೂಜಿತೆ; ವಿದ್ಯೆ ಇಲ್ಲದವನು ಪಶುವು.**

**-- ಭರ್ತೃಹರಿ**







# ದಾನ

- ಎನ್. ಬಸವಾರಾಧ್ಯ,
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು,
ಪಂಪಮಹಾಕವಿ ರಸ್ತೆ,
ಚಾಮರಾಜಪೇಟೆ,
ಬೆಂಗಳೂರು-೫೬೦ ೦೧೮

ದಾನ ಅನಾದಿಕಾಲದಿಂದ ನಮ್ಮ ಜನತೆಯಲ್ಲಿ ರೂಢಮೂಲವಾಗಿದೆ. ದಾನ ಶಬ್ದಕ್ಕೆ ಕೊಡುಗೆ, ಕಾಣಿಕೆ, ಉಪಾಯನ ಎಂಬ ಅರ್ಥಗಳಿವೆ. ದಾನ ಧರ್ಮ ಇವು ಅವಿನಾಭಾವ ಸಂಬಂಧದಿಂದ ಕೂಡಿದೆ. ಈ ದಾನ ಧರ್ಮಗಳನ್ನು ನಿರ್ಬಂಧದಿಂದಾಗಲಿ ತಿರಸ್ಕಾರ ಬುದ್ಧಿಯಿಂದಾಗಲಿ ಮಾಡಬಾರದು. ಆದರ ಪ್ರೀತಿಪೂರ್ವಕವಾಗಿ ಮಾಡಬೇಕು. ಒಂದು ಪ್ರಾಚೀನ ಶ್ಲೋಕ ಇಂತಿದೆ.

**ಅದಾನದೋಷೇಣ ಭವೇದ್ದರಿದ್ರಃ ದಾರಿದ್ರ್ಯ ದೋಷೇಣ ಕರೋತಿಪಾಪಂ**
**ಪಾಪಸ್ಯ ಹೇತೋರ್ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ**

ಹಿಂದೆ ದಾನವನ್ನು ಮಾಡದೆ ಇದ್ದುದರಿಂದ ಈಗ ಬಡವನಾಗಿದ್ದಾನೆ. ಬಡತನದ ಕಾರಣದಿಂದ ಪಾಪವನ್ನು ಮಾಡಬೇಕಾಗುತ್ತದೆ. ಪಾಪಾಚರಣೆಯಿಂದ ನರಕದುಃಖವನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಮತ್ತೆ ಮತ್ತೆ ಬಡವನಾಗಿಯೂ ಪಾಪಿಯಾಗಿಯೂ ಜನ್ಮವನ್ನು ಪಡೆಯಬೇಕಾಗುತ್ತದೆ. ಆದುದರಿಂದ ದಾನವು ಒಂದು ಮಹತ್ವವುಳ್ಳ ಧರ್ಮವಾಗಿದೆ. ತಿಳಿವಳಿಕೆ ಸಹಾನುಭೂತಿ ಪ್ರೀತಿ ಪೂರ್ವಕವಾಗಿ ದಾನವನ್ನು ಮಾಡಬೇಕು.

ದೇವರದಾಸಿಮಯ್ಯನ ಒಂದು ವಚನ ಇದು

**ಎತ್ತು ನಿಮ್ಮದಾನ ಬಿತ್ತು ನಿಮ್ಮ ದಾನ**
**ಸುತ್ತಿ ಹರಿವ ಸಾಗರವೆಲ್ಲ ನಿಮ್ಮದಾನ**
**ನಿಮ್ಮದಾನವ ನುಂಡು ಅನ್ಯರ ಹೊಗಳುವ**
**ಕುನ್ನಿಗಳನೇನೆಂಬೆ ರಾಮನಾಥಾ.**

ಸೋಮೇಶ್ವರ ಶತಕದಲ್ಲಿ "ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನವಂ" ಎಂದಿದೆ. ಸರ್ವಜ್ಞ ಕವಿ 'ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು' ಎಂದಿರುವುದು ಸರ್ವವಿದಿತವಾಗಿದೆ.

ಎಲ್ಲದಾನಗಳಲ್ಲಿ ಅನ್ನದಾನವೇ ಸರ್ವಶ್ರೇಷ್ಠ ಎಂದು ಭಾವಿಸಿ ಜಕ್ಕಿಯಬ್ಬೆ ಎಂಬಾಕೆ ದೀನಾನಾಥರನ್ನು ತುಷ್ಟಿಬಡಿಸುವುದಕ್ಕಾಗಿ ಭೂಮಿದಾನ ಮಾಡಿರುವುದು ಶಾಸನೋಕ್ತವಾಗಿದೆ. ಕ್ರಿ. ಶ. ೧೦೯೨ರ ಈ ಶಾಸನ ಪದ್ಯದಲ್ಲಿ

**ದಾನದೊಳನ್ನದಾನಮೆ ಸಾರಂ**
**ದೀವಾನಾಥಗೇ ತುಷ್ಟಿದಾನಮೆನುತ್ತಂ**
**ತಾನರಿದು ಜಕ್ಕಿಯಬ್ಬೆಯ**
**ಶೋವಿಧಿ ಪತ್ರಕ್ಕೆ ಭೂಮಿದಾನಮನಿತ್ತಳ್**

ಎಂದು ಹೇಳಿದೆ.

ದಾನಬುದ್ಧಿ ಧರ್ಮಬುದ್ಧಿಗಳನ್ನು ನಿರಂತರವಾಗಿ ಸಾರುತ್ತಿರುವ ಈ ಪದ್ಯ ಒಂದು ಜ್ವಲಂತ ನಿದರ್ಶನವಾಗಿದೆ. ವಿಜಯನಗರದ ಪ್ರೌಢಪ್ರತಾಪ ದೇವರಾಯನ ಮಂತ್ರಿಯಾಗಿದ್ದ ಕನ್ನಡಿಗ ಕುಲಕ್ಕೆ ರನ್ನಗನ್ನಡಿಯಂತಿದ್ದ ಲಕ್ಷ್ಮೀಧರಾಮಾತ್ಯ ಮಗುವಾಗಿದ್ದಾಗ ಆತನ ತಾಯಿ ಹಾಲು ಕುಡಿಸುತ್ತಿದ್ದಾಗ ಆತನ ಕಿವಿಯಲ್ಲಿ ಹೇಳುತ್ತಿದ್ದುದು ಹೀಗೆ :

**ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಪ**
**ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ**
**ಗೇರೆಮೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆತಾ**
**ಯೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನ್**

ಇದರ ಅರ್ಥ ಇಷ್ಟೆ. ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯವನ್ನು ನಿರ್ಮಿಸು, ಬಂಧನಕ್ಕೆ ಸಿಕ್ಕಿದ ಅನಾಥರನ್ನು ಬಿಡಿಸು, ಸ್ನೇಹಿತರಿಗೆ ಅನುಕೂಲಮಾಡಿಕೊಡು, ನಂಬಿದವರಿಗೆ ಆಶ್ರಯದಾತನಾಗು, ಸತ್ಪುರಷರನ್ನು ರಕ್ಷಿಸು ಎಂದು.



# ಪ್ರೀತಿ

- ಪ್ರೊ. ವಸಂತ ಕುಷ್ಟಗಿ
ಎಂ.ಐ.ಜಿ. ೨೬, ಆದರ್ಶನಗರ,
೧ನೇ ಹಂತ, ಕಲಬುರಗಿ.

ಪ್ರೀತಿ, ಪ್ರೇಮ, ಒಲುಮೆ - ಇತ್ಯಾದಿ ಬಹು ಭಾವಾತ್ಮಕವಾದ ಪದಗಳು ಜಗತ್ತಿನ ಪ್ರತಿಯೊಂದು ಮೂಲೆಯ ವಾತಾವರಣದ ಕಣಕಣಗಳಲ್ಲಿ ಬೆರೆತು ಹೋಗಿವೆ. ಈ ಬೆರಿಕೆಯು ಅರ್ಥವತ್ತಾದದ್ದು. ಈ ಎಲ್ಲ ಪದಗಳ ಅಂತಃಸತ್ವವು 'ನಲ್'ದ ಒಳಮಿಡಿತವೇ ಆಗಿದೆ. ಈ ನಲ್ ಅಥವಾ ಪ್ರೀತಿ ಬಹು ಪ್ರಿಯವಾದ ವಸ್ತು. ಇದರ ಆಳ, ಅಂತ್ಯ, ಎತ್ತರ, ಬಿತ್ತರ, ಯಾವುದಕ್ಕೂ ಇತಿಮಿತಿಯೇ ಇಲ್ಲ. ಅದು ಹಿಗ್ಗಿಸಿದಷ್ಟು ಹಿಗ್ಗಿ ಹೋಗುತ್ತದೆ. ಅದರ ವಿಕಾಸಕ್ಕೆ ಒಂದಿನಿತು ಆಘಾತವಾದರೆ ಸಾಕು ಜಗದಗಲ ಮುಗಿಲಗಲ ಜಲಾಂತರಾಳದಗಲವಾಗಿರುವ ಈ ಪ್ರೀತಿ ಕುಗ್ಗಿ ಬಸವಳಿದು ನೀರಿನ ತಳದಲ್ಲಿಯೇ ಕರಕಾಗಿಯೂ ಕರಗಿ ಬಿಡುತ್ತದೆ.

ನಿರ್ಮಲ ಮನಸ್ಸಿನಿಂದ, ಔದಾರ್ಯದಿಂದ ಪ್ರೀತಿಯನ್ನು ಆಲಂಗಿಸಿ ಕಿಂಚಿತ್ ತ್ಯಾಗಕ್ಕೆ ಸಿದ್ಧವಾಗಿದ್ದು, ಏರಿಳಿತಗಳಲ್ಲಿ ಕೊಂಚ ತಾಳ್ಮೆಯನ್ನು ಮರೆಯದೆ ಇದ್ದರೆ, ಕೇವಲ ನಿರರ್ಥಕ ಭಾವನೆಗಳಿಗೆ ಕೊಚ್ಚಿ ಹೋಗಿ ನುಚ್ಚು ನುರಿಯಾಗದೆ ವಿವೇಕವನ್ನು ಬಳಸಿಕೊಂಡು ಪ್ರೀತಿಯ ವ್ಯವಹಾರದಲ್ಲಿ ಅಪ್ಯಾಯ ಮಾನವಾದರೆ - ತಾಳಿದ ಮನಸ್ಸಿಗೆ ಪ್ರೀತಿ, ಕಾಮಧೇನು, ಕಲ್ಪವೃಕ್ಷವಾಗಿ ಆನಂದ ಪ್ರಾಪ್ತಿಯು ಸಿದ್ಧಹಸ್ತ.

ಪ್ರೀತಿಯೆಂಬುದು "ಕಾಮ" ಅರ್ಥಾತ್ "ಅಪೇಕ್ಷೆ" ಎಂಬ ಬೀಜದಿಂದಲೇ ವಿಕಾಸಗೊಂಡಿದ್ದರೂ, ಆ ವಿಕಾಸದಲ್ಲಿ ತ್ಯಾಗವೊಂದು ಜಾಗೃತವಾಗಿದ್ದರೆ ಅಂತಹ ಪ್ರೀತಿಯಲ್ಲಿ ಮೋಕ್ಷದ ಬೆಳಕು ಕ್ರೋಢೀಕೃತವಾಗಿ ಬದುಕು ರುಚಿಯಾಗುತ್ತದೆ. ಇಂತಹ ಪ್ರೀತಿಯ ಒಗಟನ್ನು ಬಿಡಿಸುವುದು ಕಷ್ಟಸಾಧ್ಯ. ಆದರೆ ಈ ಬಗ್ಗೆ ಪ್ರಯತ್ನವು ನಾರದ ಮಹರ್ಷಿಯ ಕಾಲದಿಂದಲೂ ನಡೆದೇ ಇದೆ. ಅಂತೆಯೇ ಇಂತಹ ಪ್ರೀತಿಯ ರುಚಿಯ ಅನುಭವವು ಮೂಕನ ಆಸ್ವಾದನೆಯಂತೆ ಅದನ್ನು ಮಾತುಗಳಲ್ಲಿ ಬಿಚ್ಚಿ ಇಡಲು ಸಾಧ್ಯವಿಲ್ಲ. ಏಕೆಂದರೆ ಆ ಅನುಭವವನ್ನು ಬಿತ್ತರಿಸಲು ಮಾತು ಬಡವಾಗುತ್ತದೆ. ಮಾತು ಮೌನವಾಗುತ್ತದೆ. ನೋಟ ಅಡ್ಡಗಲವಾಗಿ ಅಂತರಂಗದ ಆಳ ವಿಸ್ತತವಾಗುತ್ತದೆ.

ಅನೇಕ ಜನ, ಪ್ರೀತಿಯೆಂದರೆ ಕೇವಲ ಗಂಡು ಹೆಣ್ಣಿನ ಆವೇಶಪೂರ್ಣ ಆಕರ್ಷಣೆ ಎಂದು ಸೀಮಿತವಾಗಿ ತಿಳಿದುಕೊಳ್ಳುವುದುಂಟು. ಆದರೆ ಪ್ರೀತಿಯ ಸುತ್ತಲೂ ಆವರಿಸಿರುವ ಆವೇಶದ ಬುರುಗು ಇಳಿದು, ನೀರು ತಿಳಿಯಾದಾಗ, ನೀರು ಜುಳು ಜುಳು ಹರಿಯತೊಡಗಿದಾಗ - ಬದುಕಿನುದ್ದಕ್ಕೂ ಗಂಡು ಹೆಣ್ಣಿನ ಪ್ರೀತಿ, ಅಕ್ಕನ ಅಕ್ಕರೆಯಾಗಿ, ತಂಗಿಯ ಒಲುಮೆಯಾಗಿ, ತಾಯಿಯ ವಾತ್ಸಲ್ಯವಾಗಿ, ಮಡದಿಯ ಮಾಧುರ್ಯವಾಗಿ, ಅಣ್ಣ ತಮ್ಮಂದಿರ ಸೌಹಾರ್ದವಾಗಿ, ತಂದೆಯ ರಕ್ಷತಾ ಒಲುಮೆಯಾಗಿ, ಭಾವ-ಭಾವ ಮೈದುನರ ವಿಶ್ವಾಸವಾಗಿ, ಅಜ್ಜ ಅಜ್ಜಿಯರ ಮಾಗಿದ ಮಮತೆಯಾಗಿ - ಹೀಗೆ ಈ ಪ್ರೀತಿ ಮಾನವ ಮಂದಾರವಾಗಿ ವಿಶ್ವಾಶ್ವತ್ಥದ ಚಿಗುರಾಗಿ ಬೆಳೆಯುತ್ತಲೇ ಇರುತ್ತದೆ. ಆದ್ದರಿಂದ "ಪ್ರೀತಿ" ಎಂಬುದು ಅವಿನಾಶಿನಿ. ಇದಿಲ್ಲದೆ ಮಾನವನ ಬದುಕು ಶೂನ್ಯ. ಬರಿ ಸಕ್ಕರೆಯನ್ನು ತಿನ್ನುತ್ತ ಹೋದರೆ ತಲೆ ಚಿಟ್ಟು ಬಂದು, ಬದುಕು ಓಕರಿಕೆಯಾಗುತ್ತದೆ. ಆದ್ದರಿಂದ ಈ ಪ್ರೀತಿ ಎಂಬುದು ಲವಣ ಸಾದೃಶ್ಯ. ಏಕೆಂದರೆ ಈ ಪ್ರಪಂಚದಲ್ಲಿ ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಹೆಚ್ಚಿನ ಬಂಧುವಿಲ್ಲ. ಇದೆಲ್ಲ ಪ್ರೀತಿಯೇ ಅಲ್ಲಿ ಮೂಲ ಬಂಧನ. ಆದ್ದರಿಂದ ಪ್ರಪಂಚದ ಕಳ್ಳುಬಳ್ಳಿಯನ್ನು ಮಿಡಿದರೆ ಸಾಕು ಲವಣ ಸಾದೃಶ್ಯವಾದ ಈ "ಪ್ರೀತಿ" ಎಂಬ ಕಣ್ಣರಿಯದ ಧಾತು ಚಿಮ್ಮಿ ಸದಾ ಭವಿಷ್ಯತ್ತನ್ನು ವರ್ತಮಾನವಾಗಿಸುತ್ತಲೇ ಸಾಗುತ್ತದೆ.

ಇಂತಹ ಸರ್ವಶಕ್ತಿ ಮಾನ್ಯ ಪ್ರೀತಿಯನ್ನು ಮಾಡಬಾರದೆಂದು ಅದೆಷ್ಟೋ ಜನ ವಿವೇಕವನ್ನು ಬಳಸದೇ ಹೇಳುತ್ತಾರೆ. ಅಲ್ಲಿ ಕೇವಲ ಹಳದಿಯಾದ ದೃಷ್ಟಿಗೆ ಕೇವಲ ಬುರುಗಿನಿಂದ ಆಚ್ಛಾದಿತವಾದ ಆ ಪರಿಘಕ್ಕೆ ಮೋಡ ಮುಸುಕಿದ ಆಕಾಶದಲ್ಲಿ ಸೂರ್ಯ ಕಾಣುವುದಿಲ್ಲ. ಕಾರಣ ಅವರನ್ನು ಕಾಡುತ್ತಿರುವ ದುಂಬಿಗಳನ್ನು ಅರ್ಥಾತ್ ಮೋಡವನ್ನು ಓಡಿಸುವ ದುಷ್ಯಂತ ರೂಪದ ಪ್ರೀತಿಯನ್ನಾಗಲೀ, ತ್ಯಾಗ ಮನೋವೃತ್ತದ ಶಕುಂತಲೆಯ ಪಕ್ಷಿ ಧ್ವನಿಯನ್ನಾಗಲಿ ಅಂತಹವರು ಅನುಭವಿಸಿರುವುದಿಲ್ಲ. ಅರ್ಥಾತ್ ವಿವೇಕ ಬಳಸಿಕೊಂಡು





ಅದರ ಬೆಳಕಿನಲ್ಲಿ ತ್ಯಾಗದ ಮೌಲ್ಯವು ನಾಗರತ್ನದ ಹೊಳಪಿನಿಂದ ಮೂಡಿದ ಪ್ರೀತಿಯ ವಿರಾಟ ಸ್ವರೂಪವನ್ನು ಕಂಡವನಿಗೆ, ಕಂಡವಳಿಗೆ ಪ್ರೀತಿ ಓಂಕಾರವಾಗಿ, ಈ ಬದುಕೆಲ್ಲ ಅಕ್ಷೀರ ಸಾಗರದ ಆನಂದಸಾಗರವು ಲಭ್ಯವಾಗುತ್ತದೆ.

ಇದರಂತೆ ಪರಮಾತ್ಮನ ಸಾಕ್ಷಾತ್ಕಾರವಾಗಲೀ ಇಲ್ಲವೆ ಆಧ್ಯಾತ್ಮ ಸಾಧನೆಯಾಗಲೀ ಆನಂದ ಪ್ರಾಪ್ತಿಯಾಗಲೀ ಆಗಬೇಕಾದರೆ ಇದೇ "ಪ್ರೀತಿ"ಯು ಭಕ್ತಿಯಾಗಿ, ಮಧುರ ಭಕ್ತಿಯಾಗಿ ಅದು ಹೋಗುತ್ತ ಕೊಯುತ್ತ, ಬರುತ್ತ ಕೊಯ್ಯುತ್ತ ಈ ಪ್ರೀತಿಯು ತನ್ನ ಸದೃಶವಾದ ದರುಶನವನ್ನು ಮೂಡಿಸುತ್ತದೆ. ಆದರೆ ಈ ಸಂಸ್ಕಾರದಲ್ಲಿಯ ನೋವು ನೋವಾಗಿರುವುದಿಲ್ಲ. ಭೂವ್ಯೋಮ ಪಾತಾಳಗಳನ್ನು ಬಂಧಿಸುವ ಏಕಮಾತ್ರ ಮಾತ್ರದ ಪ್ರೀತಿಯ ಓಂಕಾರದ ಗುಮ್ ಗುಮ್ ಗಾನವಾಗಿರುತ್ತದೆ. ಆದರೆ ಇದನ್ನರಿಯದೆ ಪ್ರಪಂಚದಲ್ಲಿ ಪ್ರೀತಿ ಮಾಡಬಾರದು ಎಂದು ಹೇಳುವ, ರುಕ್ಷರಿಗೆ, ತ್ಯಾಗದ ಪರುಷಮಣಿ ಸಿಕ್ಕಿರುವುದಿಲ್ಲ. ಅಂತೆಯೇ ತ್ಯಾಗಿಯಾದವನಿಗೆ ಮಾತ್ರ, ಪ್ರೀತಿಯ ನಿಚ್ಚಳ ಅನುಭವದಿಂದ, ಅದೇ ಆ ಪ್ರೀತಿಯ ಸೂರ್ಯನ ಸಾಕ್ಷಾತ್ಕಾರ.

## ಕಾಯಕ

'ಕಾಯಕ' ತತ್ವದ ಇನ್ನೊಂದು ಬಹುಮುಖ್ಯವಾದ ಅಂಶವೆಂದರೆ ಅಸಂಗ್ರಹ, ಅಗತ್ಯವಾದುದಕ್ಕಿಂತ ಹೆಚ್ಚನ್ನು ಸಂಗ್ರಹಿಸಿಟ್ಟುಕೊಳ್ಳಬಾರದು. "ಅಂದಂದಿನ ಕಾಯಕ ಅಂದಂದು ಮಾಡಿ ಶುದ್ಧರಾಗಬೇಕು". ಇದನ್ನು ಶರಣರು ಬಹಳ ಸೂಕ್ಷ್ಮವಾಗಿ ವಿವೇಚಿಸಿದರು. ಒಮ್ಮೆ ಆಯ್ದಕ್ಕಿ ಮಾರಯ್ಯ ತನ್ನ ಅಂದಿನ ಅಗತ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿಯನ್ನು ಆಯ್ದು ತಂದಾಗ ಆತನ ಪತ್ನಿ ಲಕ್ಕಮ್ಮ "ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗೆ ಉಂಟೇ ಅಯ್ಯ?" ಎಂದು ಹೇಳಿದುದಲ್ಲದೆ ಹೆಚ್ಚಾದ ಅಕ್ಕಿಯನ್ನು ಅಲ್ಲೇ ಸುರಿದು ಬರುವಂತೆ ಮಾಡಿದಳೆಂಬ ಕಥೆ ಬರುತ್ತದೆ. ಆ ಸಂದರ್ಭದಲ್ಲಿ ಆಕೆ ಹೇಳುತ್ತಾಳೆ ;

**"ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತರಿದು**
**ದಾಸೋಹವ ಮಾಡಬಹುದೆ?**
**ಒಮ್ಮನವ ತಂದು, ಒಮ್ಮನದಲ್ಲಿಯೇ ಮಾಡಿ**
**ಇಮ್ಮನವಾಗದ ಮುನ್ನವೆ ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ**
**ಸಲ್ಲಬೇಕು ಮಾರಯ್ಯ".**

ಒಮ್ಮನವ ಮೀರಿ ಇಮ್ಮನದಲ್ಲಿ ತರಬಾರದು. ಇಮ್ಮನವಾಗದ ಮುನ್ನವೇ ಅದನ್ನು ದಾಸೋಹದಲ್ಲಿ ವಿನಿಯೋಗಿಸಿ ಬಿಡಬೇಕು. "ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆಡೆನಾದಡೆ ನಿಮ್ಮಾಣೆ, ನಿಮ್ಮ ಪುರಾತನರಾಣೆ" ಎನ್ನುತ್ತಾರೆ ಬಸವಣ್ಣನವರು. ತನಗೆ ಅಗತ್ಯವಾದುದಕ್ಕಿಂತ ಹೆಚ್ಚಾಗಿ ಶೇಖರಿಸಿಟ್ಟುಕೊಂಡರೆ ಒಂದು ರೀತಿಯಲ್ಲಿ ಅದನ್ನು ಕದ್ದಂತೆ ಎಂದು ಶರಣರು ಭಾವಿಸಿದ್ದರು. ಇದೇ ಅಭಿಪ್ರಾಯವನ್ನು ಗಾಂಧೀಜಿ "We are all thieves in a way; if we possess anything that we do not require for our immediate use we thieve it from others" ಎಂಬ ಮಾತಿನಲ್ಲಿ ಬಹಳ ಸ್ಪಷ್ಟವಾಗಿ ಹೇಳಿದ್ದಾರೆ. ಪ್ರಕೃತಿ ಎಲ್ಲರ ಅವಶ್ಯಕತೆಗಳನ್ನು ಪೂರೈಸುವಷ್ಟನ್ನು ಉತ್ಪಾದಿಸುತ್ತದೆ. ಎಲ್ಲರೂ ಅವರವರಿಗೆ ಬೇಕಾದಷ್ಟನ್ನು ತೆಗೆದುಕೊಂಡರೆ ಸಮಾಜದಲ್ಲಿ ವಿಷಮತೆಯೆಂಬುದೇ ಇರುವುದಿಲ್ಲ.

- ಡಾ. ಎಚ್. ತಿಪ್ಪೇರುದ್ರಸ್ವಾಮಿ
(ವಚನ ಸಾಹಿತ್ಯ : ವೈಚಾರಿಕ ಅಧ್ಯಯನ, ಷಟ್ ೨೧-೨೩)



# ಅಂತರಂಗ - ಬಹಿರಂಗ : ಒಂದು ಚಿಂತನೆ

- ಅನ್ನಪೂರ್ಣ ಬಸವರಾಜ್
ಷಣ್ಮುಖಪ್ರಿಯ, ೫ನೇ ಮುಖ್ಯರಸ್ತೆ,
೭ನೇ ಅಡ್ಡ ರಸ್ತೆ, ಎಂ. ಸಿ. ಬಡಾವಣೆ,
ವಿಜಯನಗರ, ಬೆಂಗಳೂರು-೪೦

ಬಸವಣ್ಣನವರು ೮೦೦ ವರ್ಷಗಳ ಹಿಂದೆಯೇ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ವಿಚಾರ, ಚಿಂತನೆಗಳ ಮೂಲಕ ಜನರಲ್ಲಿ ಜಾಗೃತಿ ಮೂಡಿಸಲು ತಮ್ಮನ್ನು ತೊಡಗಿಸಿಕೊಂಡ ಮಹಾಪುರುಷ. ನಡೆ-ನುಡಿಯಲ್ಲಿ ಏಕತಾನತೆ ಬರಬೇಕೆಂದು ಬಯಸಿದ್ದ ಅವರು ನುಡಿದಂತೆ ನಡೆದು ಇತರರಿಗೆ ಆದರ್ಶವಾದರು. ಅವರ ಸಮರ್ಥ ಮಾರ್ಗದರ್ಶನದಲ್ಲಿ ಶರಣರು ಜಡ್ಡುಗಟ್ಟಿದ ಮೂಢನಂಬಿಕೆ ಕಂದಾಚಾರಗಳ ವಿರುದ್ಧ ಹೋರಾಟ ನಡೆಸಿದರು. ಸಮಾಜದಲ್ಲಿ ಬೇರೂರಿದ್ದ ಅಸಮಾನತೆಯನ್ನು ಹೋಗಲಾಡಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ಧರ್ಮವನ್ನು ಮಾನವೀಯ ಮೌಲ್ಯಗಳ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಚಿಂತನೆ ಮಾಡಿದರು. ತಮ್ಮ ಭಾವನೆಗಳನ್ನು ವಚನಗಳ ಮೂಲಕ ಅಭಿವ್ಯಕ್ತಗೊಳಿಸಿದರು. ಬಸವಣ್ಣನವರ ವ್ಯಕ್ತಿತ್ವ ಬಹುಮುಖವಾದುದು. ಇವರು ಕಲ್ಯಾಣದಲ್ಲಿ ಕಳಚೂರ್ಯ ವಂಶದ ಮಹಾರಾಜ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿ ಕಾರ್ಯನಿರ್ವಹಿಸಿ, ಒಬ್ಬ ದಕ್ಷ ಆಡಳಿತಗಾರ, ರಾಜಕೀಯ ಮುತ್ಸದ್ದಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಅವರು ಮಾನವೀಯ ಮೌಲ್ಯಗಳಿಗೆ ಸ್ಪಂದಿಸಿ ಕೆಳವರ್ಗದವರ ದುಃಖ ದುಮ್ಮಾನಗಳ ಕೊರಳಿಗೆ ದನಿಯಾದರು. ಇದರಿಂದ ಮಾನವಧರ್ಮ ಅತ್ಯುನ್ನತ ಶಿಖರ ಮುಟ್ಟಲು ಸಹಾಯಕವಾಯಿತು. ವಚನಗಳ ರೂಪದಲ್ಲಿ ಹೊರಹೊಮ್ಮಿ ಸಮಾಜ ಪರಿವರ್ತನೆಗೆ ನಾಂದಿಯಾಯಿತು.

ಬಸವಣ್ಣನವರು ತಮ್ಮ ವಚನವೊಂದರಲ್ಲಿ ಮನಸ್ಸನ್ನು ಕುರಿತು,

**ಕೊಂಬೆಯ ಮೇಲಣ ಮರ್ಕಟನಂತೆ**
**ಲಂಘಿಸುವುದೆನ್ನ ಮನವು, ನಿಂದಲ್ಲಿ**
**ನಿಲ್ಲಲೀಯುವುದೆನ್ನ ಮನವು, ಹೊಂದಿದಲ್ಲಿ**
**ಹೊಂದಲೀಯದೆನ್ನ ಮನವು, ಕೂಡಲಸಂಗಮದೇವ,**
**ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸಾ ನಿಮ್ಮ ಧರ್ಮ**

ಎಂದು ಹೇಳಿದ್ದಾರೆ.

ಮನಸ್ಸು ಚಂಚಲವಾದದದ್ದು. ಪಂಚೇಂದ್ರಿಯಗಳ ಹಿಂದೆ ಓಡುವುದೇ ಅದರ ಸಹಜ ಪ್ರವೃತ್ತಿ. ಮನಸ್ಸೆಂಬ ಮರ್ಕಟವನ್ನು ಸರಿಪಡಿಸಬೇಕಾದರೆ ವಿಚಾರದಿಂದ ಮಾತ್ರ ಸಾಧ್ಯ. ಚಿತ್ತ ಶುದ್ಧಿಯಾಗಬೇಕಾದರೆ ಆರು ಸದ್ಗುಣಗಳಾದ ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ ಮತ್ತು ಸಮಾಧಾನವನ್ನು ನಾವು ಬೆಳೆಸಿಕೊಳ್ಳಬೇಕು. ಇವುಗಳಿಂದ ನಮ್ಮ ಆತ್ಮಶಕ್ತಿಗೆ ಬ್ರಹ್ಮಚೈತನ್ಯ ತಾನೇ ತಾನಾಗಿ ಬಂದಂತಾಗುತ್ತದೆ. ಪ್ರಸ್ತುತ ಪರಿಸ್ಥಿತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ, ನಮ್ಮ 'ಚಿತ್' ಎಂಬ ರಿಮೋಟ್ ಕಂಟ್ರೋಲ್‌ನಿಂದ (ಮನಸ್ಸೆಂಬ) ಬಾಹ್ಯ ಮನಸ್ಸೆಂಬ ದೂರದರ್ಶನದ ದೃಶ್ಯಗಳಿಂದ ಅವುಗಳನ್ನು ಮತ್ತೆ ವಿಷಯ ಲಂಪಟಗಳಿಂದ ಪರಿತಪಿಸುವ ಇಂದ್ರಿಯಗಳನ್ನು ನಿಯಂತ್ರಿಸಬಹುದು. ಮನುಷ್ಯನಿಗೆ ಹೃದಯ ಶ್ರೀಮಂತಿಕೆ ಇಲ್ಲದೇ ಇದ್ದಾಗ ಮಾನವ ಮೃಗನಾಗುತ್ತಾನೆ. ನೀತಿಬಾಹಿರನಾಗದೆ ತ್ರಿಕರಣಪೂರ್ವಕವಾಗಿ ಅಂತರಂಗ ಮತ್ತು ಬಹಿರಂಗ ಶುದ್ಧಿಯಿಂದ ಇರುವುದೇ ಮಾನವೀಯತೆ. ಆಶೆ-ಆಮಿಷಗಳಿಗೆ ಒಳಗಾಗುವ ಮತ್ತು ಮಹತ್ವಾಕಾಂಕ್ಷೆಗಳಿಗೆ ಮನಸ್ಸೆಂಬ ಮರ್ಕಟ ಕಡಿವಾಣವಿಲ್ಲದ ಕುದುರೆಯಂತೆ ನಾಗಾಲೋಟದಿಂದ ಓಡುವ ಮೊದಲೇ ಎಚ್ಚೆತ್ತುಕೊಳ್ಳಬೇಕು. ಆತ್ಮಪರಿಶೋಧನೆಗೆ ಮತ್ತು ಆತ್ಮಶುದ್ಧಿಗೆ ನಮ್ಮನ್ನು ನಾವೇ ಸಿದ್ಧಪಡಿಸಿಕೊಂಡು ನಮ್ಮ ನಿಮ್ಮ ಅಂತರಂಗಕ್ಕೆ ಉತ್ತಮ ಆಲೋಚನೆಗಳಿಂದ ಕೂಡಿದ ಶಿಕ್ಷಣ ಕೊಟ್ಟಾಗ ಮಾತ್ರ ಸ್ಥಿತಪ್ರಜ್ಞತೆ ಉಂಟಾಗುತ್ತದೆ.

ಧರ್ಮ, ನೀತಿ, ತತ್ವಾತತ್ವ, ವಿಮರ್ಶೆಗಳನ್ನು ರಾಜಕೀಯ ಕ್ಷೇತ್ರದಿಂದಲೇ ಶ್ರೀಸಾಮಾನ್ಯನ ಜೀವನ ರಥಕ್ಕೂ ಕಟ್ಟಿ ಮಾನವ ಧರ್ಮವನ್ನೇ ವಚನಗಳ ಮೂಲಕ ಶ್ರೀಮಂತಗೊಳಿಸಿದರು. ಕಾರಣಿಕ ಪುರುಷರ ಬಾಳಿನ ಬಾಹ್ಯರೇಖೆಗಳು ಅಗೋಚರ. ಬುದ್ಧ, ಬಸವ, ಕ್ರಿಸ್ತ, ಗಾಂಧೀಜಿ ಇವರೆಲ್ಲರ ಜೀವನವು ನಮ್ಮ ಬದುಕಿಗೆ ತೋರುಗಂಬಗಳಾಗಿವೆ. ಅವರು ತೋರಿದ ದಾರಿ, ಬೀರಿದ ಬೆಳಕು, ನುಡಿದ ವಚನಗಳು ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕವಾಗಿ ನಿಕಟ ಸಂಬಂಧವಾಗಿತ್ತು. ಹೀಗೆ ಬಸವೇಶ್ವರರ ಅನುಭಾವ ವಚನಗಳು ೧೨ನೇ ಶತಮಾನದಲ್ಲಿ ಅಂದಿನ ಸಮಾಜಕ್ಕೆ ಸುಖ, ಶಾಂತಿ, ನೆಮ್ಮದಿಗೂ ಎಷ್ಟು ಸಮಂಜಸವಾಗಿತ್ತೋ ೨೦ನೇ ಶತಮಾನದಲ್ಲೂ



ವಿಚಾರ

ಸಮಂಜಸವೆನಿಸಿದೆ ಹಾಗೂ ಮಾರ್ಗದರ್ಶಕಗಳಾಗಿವೆ.

**ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,**
**ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,**
**ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ.**

ಮಾನವ ಜೀವನದಲ್ಲಿ ಅಂತರಂಗ ಬಹಿರಂಗ ಒಂದೇ ನಾಣ್ಯದ ಎರಡು ಮುಖಗಳು. ಇವೆರಡೂ ಆತ್ಮ ದೇಹಗಳಿದ್ದಂತೆ ಒಂದನ್ನು ಬಿಟ್ಟು ಇನ್ನೊಂದಿಲ್ಲ. ಶಬ್ದದೊಳಗಿನ ಶಬ್ದದಂತೆ ಅಂತರಂಗದ ಸುಪ್ತಮನಸ್ಸು ನಮ್ಮಲ್ಲಿ ಯಂತ್ರದೋಪಾದಿಯಲ್ಲಿ ಪ್ರತಿಕ್ಷಣವೂ ಕಾರ್ಯ ನಿರ್ವಹಿಸುತ್ತಿರುತ್ತದೆ. ಕೋಟಲೆಯಿಂದ ಕೂಡಿರುವ ಮನಸ್ಸು ಕಾರಣಕ್ಕೆ ಕಾರಣವಿದ್ದ ಹಾಗೆ. ಮಾನಸಿಕ ದುರ್ಬಲತೆಯೂ ಕೂಡ ಕೆಟ್ಟದ್ದೆಂದು ನಾವು ತಿಳಿದುಕೊಳ್ಳಬೇಕು.

ಧರ್ಮವಿಲ್ಲದೆ ನೀತಿ ನೆಲಸದು, ರೀತಿ-ನೀತಿಯಿಲ್ಲದೆ ಧರ್ಮ ಉಳಿಯದು. ಮಾನವ ಇಷ್ಟ-ಅನಿಷ್ಟಗಳನ್ನು ನಿರ್ಣಯಿಸಿ ಸದ್ಧರ್ಮದಲ್ಲಿ ನಡೆಯುವುದೇ ನೀತಿ. ಅನಿಷ್ಟ ಕ್ರಿಯೆಯಿಂದ ಅನೀತಿಯಲ್ಲಿ ನಡೆದದ್ದೇ ಆದರೆ ಜ್ಞಾನಶಕ್ತಿ ನಶಿಸಿ ಮನುಷ್ಯನ ಕಣಕಣವ ನಿಸ್ಸತ್ವಗೊಳ್ಳುತ್ತವೆ. ಆಗ ಸಂಯಮ, ಸಮಾಧಾನಗಳು ಕುಂಠಿತವಾಗುತ್ತಾ ಬರುತ್ತವೆ ಹಾಗೂ ಮನಸ್ಸಿನೊಳಗಿನ ಸುಪ್ತ ಮನಸ್ಸು ನಿಸ್ತೇಜನಗೊಳ್ಳುತ್ತಾ ಬರುವುದು. ನಾವು ಬಾಹ್ಯಾಡಂಬರಗಳಿಗೆ ಮನಸೋತಾಗ ನೀತಿಬಾಹಿರವಾದ ನಡೆ-ನುಡಿಗಳು ತನಗೆ ತಾನೇ ವೃದ್ಧಿಹೊಂದುತ್ತಾ ಬರುತ್ತವೆ. ವಿಕೃತಿಗೆ ನಮ್ಮ ಮನಸ್ಸನ್ನು ಬಿಡದೆ ನಿಸ್ವಾರ್ಥವಾಗಿ ಸಂತೃಪ್ತಿಯಿಂದಿರುವುದೇ ಸತ್ಯಮಾರ್ಗ. ಸತ್ಯಶುದ್ಧ ಕಾಯಕಕ್ಕೂ ಸಹ ಇದು ಮೊದಲನೆಯ ಸೋಪಾನ. ಅಲ್ಲದೆ ಮೂಕಜೀವಿಗಳಿಗೂ ಸಹ ದಯೆ ಎಂಬ ಕಾರುಣ್ಯದಿಂದ ನೋಡುವುದೇ ಅಂತರಂಗದ ಆತ್ಮಧರ್ಮ. 'ದಯೆವಿಲ್ಲದ ಧರ್ಮ ಯಾವುದಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳಲ್ಲಿ' ಎಂದು ಬಸವಣ್ಣನವರು ಹೇಳಿರುವಂತೆ ಪ್ರಾಣಿಗಳನ್ನು ಕೊಲ್ಲುವುದು ಧರ್ಮವಲ್ಲ. "ಅಹಿಂಸಾ ಪರಮೋಧರ್ಮಃ" ಎಂಬುದು ಜೀವನದ ಜೀವಾಳ. ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ ತಾಯಿ ಮಕ್ಕಳ ಬಾಂಧವ್ಯದಷ್ಟೇ ಪವಿತ್ರ. ಅಂತರಂಗ ತಾಯಿಯಾದರೆ ಬಹಿರಂಗ ಮಕ್ಕಳಿದ್ದ ಹಾಗೆ. ಅಂತರಂಗ ಶುದ್ಧಿ ತನ್ನಿಂದ ತಾನೇ ತನ್ನಲ್ಲೇ ಅಡಗಿರುವ ವಿಶಿಷ್ಟ ಸಾಮರ್ಥ್ಯ ಮತ್ತು ಶಕ್ತಿಯುಳ್ಳ ಚೇತನ. ಇದೇ ಆದಿ ಅನಾದಿಗಳಿಗೆ ಪ್ರೇರಕ ಶಕ್ತಿ. "ಮೇಲೆ ಉಪಚಾರ ಒಳಗೆ ಅಪಚಾರ" ಎಂಬಂತೆ ಸಮಾಜಕ್ಕೆ ವಿಷಜಂತುವಾದಲ್ಲಿ ನಮ್ಮ ಹುಟ್ಟಿಗೇ ಅರ್ಥವಿಲ್ಲದಂತಾಗುತ್ತದೆ. ಮನುಷ್ಯ ತಾಯಿಗರ್ಭದಿಂದಲೇ ಉಸಿರಾಡಿಕೊಂಡು ಬೆಳೆಯುತ್ತಿರುತ್ತಾನೆ. ಆದ್ದರಿಂದ ಮನುಷ್ಯ ದೈವಿಕವಾಗಿಯೇ ಮಾತೃಗರ್ಭದಿಂದ ಕ್ಷಣದಿಂದಲೇ ಹೊರಬಂದ ಅಳು ಮತ್ತು ನಗುವಿನೊಂದಿಗೇ ಜೀವನ ಪ್ರಾರಂಭವಾಗುತ್ತದೆ. ಆದರೆ ಬಾಲ್ಯಾವಸ್ಥೆಯಲ್ಲಿ ಮುಗ್ಧತೆ, ಪ್ರೌಢಾವಸ್ಥೆಗೆ ಬಂದಾಗ ಮಾಯವಾಗುತ್ತವೆ.

ಮಾನವನ ಜೀವನ ಬಾಹ್ಯಾಡಂಬರಕ್ಕಿಂತ ಅಂತರಂಗದ ಶುದ್ಧತೆಗೆ, ಪರಿಪಕ್ವತೆಗೆ ಮಹತ್ವ ಕೊಟ್ಟಾಗ ಬದುಕು ಸಹನೀಯವಾಗುತ್ತದೆ. ಬದುಕಿಗೂ ಒಂದು ಅರ್ಥ, ಬೆಲೆ ಬರುತ್ತದೆ. ಇದನ್ನೇ ಬಸವಣ್ಣನವರು ಹೇಳಿರುವಂತೆ "ಆಚಾರವೇ ಸ್ವರ್ಗ ಅನಾಕವೇ ನರಕ" ಎಂದು ಹೇಳಿದ್ದಾರೆ. ವ್ಯಕ್ತಿಯ ನಡೆ-ನುಡಿಗಳಿಂದ ಅವನ ವ್ಯಕ್ತಿತ್ವ ರೂಪಿತವಾಗುತ್ತದೆ. 'ಮಾನವ ಜನ್ಮ ದೊಡ್ಡದು ಅದ ಹಾನಿಮಾಡಬೇಡಿರೋ' ಎಂದು ದಾಸರು ಹೇಳಿರುವಂತೆ ನಮಗೆ ದೊರೆತಿರುವ ಮಾನವ ಜನ್ಮವನ್ನು ಸದುಪಯೋಗಿಸಿಕೊಳ್ಳಬೇಕು. ಹತ್ತು ಜನರಿಗೆ ಉಪಯೋಗವಾಗುವಂತೆ ಜೀವನ ನಡೆಸಬೇಕು, ಇಲ್ಲದಿದ್ದರೆ ತಳವಿಲ್ಲದ ಮಡಕೆಯಲ್ಲಿ ನೀರು ತುಂಬಿದಷ್ಟೇ ವ್ಯರ್ಥವಾಗುತ್ತದೆ. ನಡೆ-ನುಡಿಯಲ್ಲಿ ಪರಿಶುದ್ಧತೆಯನ್ನು ಕಾಪಾಡಿಕೊಂಡರೆ ಬದುಕು ಸುಂದರವಾಗುತ್ತದೆ.

ವ್ಯಕ್ತಿ ಸಮಾಜದಲ್ಲಿ ಜೀವನ ನಡೆಸುವಾಗ ಎಲ್ಲರೊಳಗೊಂದಾಗಿ ಬೇರೊಬ್ಬರಿಗೆ ತೊಂದರೆಯಾಗದಂತೆ ಬದುಕಬೇಕು. ಸಮಾಜದಲ್ಲಿ ತಾನು ಒಂದು ಅಂಗ ಎಂದು ತಿಳಿದುಕೊಂಡು ಸಮಾಜಕ್ಕೆ ಹೊರೆಯಾಗದಂತೆ ಬದುಕುವುದನ್ನು ಕಲಿಯಬೇಕು. ಆಗ ಜೀವನ ಸಾರ್ಥಕವೆನಿಸುತ್ತದೆ. ಬಹಿರಂಗದಷ್ಟೇ ಅಂತರಂಗಕ್ಕೆ ಮಹತ್ವವನ್ನು ಕೊಡಬೇಕು. ಬಹಿರಂಗ ಮತ್ತು ಅಂತರಂಗಕ್ಕೆ ಏಕತಾನತೆ ಇಲ್ಲದೆ ಇದ್ದಾಗ ಬೇವಿನ ಬೀಜಕ್ಕೆ ಬೆಲ್ಲದ ಕಟ್ಟೆಯನ್ನು ಕಟ್ಟಿ ಬೆಳೆಸದಷ್ಟೇ ಅರ್ಥಹೀನವಾಗುತ್ತದೆ. ಅಂತರಂಗದ ಮೇಲೆ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕೇ ಹೊರತು ಬಹಿರಂಗದಿಂದಲ್ಲ ಎಂಬುದನ್ನು ಅರ್ಥಮಾಡಕೊಳ್ಳಬೇಕು. ಅಂತರಂಗಕ್ಕೆ ಬೆಲೆಯನ್ನು ಕೊಡದೇ ಬಹಿರಂಗಕ್ಕಷ್ಟೇ ಪ್ರಾಮುಖ್ಯತೆಯನ್ನು ಕೊಟ್ಟಾಗ ಮರಳ ಮಡಕೆಯಲ್ಲಿ ನೀರು ತುಂಬುವ ಸಾಹಸದಷ್ಟೇ ವ್ಯರ್ಥವಾಗುತ್ತದೆ. ಬಸವಾದಿ ಶಿವಶರಣರು ಹಾಕಿಕೊಟ್ಟ ಆದರ್ಶದ ಮುಂಬೆಳಕಿನಲ್ಲಿ ನಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕು. 'ಇವನಾರವ ಇವನಾರವನೆಂದೆನಿಸದೆ, ಇವ ನಮ್ಮವ ಇವ ನಮ್ಮವ' ಎಂದು ಅರಿತು ಬಾಳುವುದನ್ನು ಕಲಿಯಬೇಕು. ಸಮಾಜದಲ್ಲಿ ಶಾಂತಿ, ನೆಮ್ಮದಿಯ ಬೀಜವನ್ನು ಬಿತ್ತಿ ನೂರಾರು ಜನರಿಗೆ ನೆರಳು ಕೊಡುವ ಹೆಮ್ಮರವಾಗಿ ಬೆಳೆಯುವಂತೆ ನೋಡಿಕೊಳ್ಳಬೇಕು.

# ಗೋಡಂಬಿ

- ಬಿ. ಸುಬ್ರಾಯ ಅಡಿಗ
ನಿವೃತ್ತ ಶಿಕ್ಷಕರು, ಸೊಂಡೂರು, ಬಳ್ಳಾರಿ ಜಿಲ್ಲೆ.

ಗೋಡಂಬಿ ತುಂಬಾ ಜನಪ್ರಿಯವಸ್ತು. ವಿಶ್ವದ ಎಷ್ಟೋ ಮಹಾರಾಜರು ದಿನನಿತ್ಯದ ಊಟದಲ್ಲಿ ಗೋಡಂಬಿಯನ್ನು ವಿಶಿಷ್ಟ ವ್ಯಂಜನವಾಗಿ ಬಳಸುತ್ತಿದ್ದರು. ಆಗ ಜನಸಾಮಾನ್ಯರಿಗೆ ಇದು ಸಿಗುತ್ತಿರಲಿಲ್ಲ. ರಷ್ಯದ ಝಾರ್ ತಮ್ಮ ಹುಟ್ಟುಹಬ್ಬದಂದು ಪ್ರಜೆಗಳಿಗೆ ಗೋಡಂಬಿ ಹಂಚುತ್ತಿದ್ದರು. ಕೆಲ ಮೊಗಲ್ ಶಾಸಕರು ಸುಂದರ ನರ್ತಕಿಯರ ಕೈಯಿಂದಲೇ ಗೋಡಂಬಿ ತಿನ್ನಲು ಇಷ್ಟಪಡುತ್ತಿದ್ದರು. ಗೋಡಂಬಿಯ ಚಟದಿಂದಾಗಿ ಎಷ್ಟೋ ರಾಜರು ಅಪಾರ ಸಂಪತ್ತನ್ನು ಕಳೆದುಕೊಂಡಿದ್ದರೆಂದೂ ಇತಿಹಾಸದಿಂದ ತಿಳಿದು ಬರುತ್ತದೆ.

ಗೋಡಂಬಿಯ ಇತಿಹಾಸಯಾತ್ರೆಯ ವೃತ್ತಾಂತವೂ ತುಂಬ ಮನೋರಂಜಕವಾದುದು. ಸುಮಾರು ೭೦೦ ವರ್ಷಗಳ ಹಿಂದೆ ಪೋರ್ತುಗಲ್‌ದ ಮೂಲನಿವಾಸಿಗಳು ಇದೊಂದು ವಿಷಮಯ ಫಲವೆಂದು ಭಾವಿಸಿದ್ದರು. ಗೋಡಂಬಿ ಮರವನ್ನು ಅವರು ತಿರಸಾರದೃಷ್ಟಿಯಿಂದ ನೋಡುತ್ತಿದ್ದರು. ಆಕಸ್ಮಾತ್ ಯಾರಾದರೂ ಗೋಡಂಬಿ ಮರದ ಕೆಳಗಿನಿಂದ ಹಾದುಹೋದರೆಂದರೆ ಪರಿವಾರದ ಮುಖಂಡ ಈ ಅಪರಾಧದ ಪ್ರಾಯಶ್ಚಿತ್ತ ರೂಪದಲ್ಲಿ ಕುಲದೇವತೆಯೆದುರು ತನ್ನ ಕೈಗೆ ಸೂಜಿ ಚುಚ್ಚಿಕೊಂಡು ಒಂದಿಷ್ಟು ರಕ್ತ ತೆಗೆದು ಕುಲದೇವತೆಯ ಪಾದಗಳಿಗರ್ಪಿಸುತ್ತಿದ್ದ ಮತ್ತು ತನ್ನ ಪರಿವಾರದ ಸದಸ್ಯರ ತಪ್ಪನ್ನು ಕ್ಷಮಿಸುವಂತೆ ಕೇಳಿಕೊಳ್ಳುತ್ತಿದ್ದ.

ಗಾಳಿ ಜೋರಾಗಿ ಬೀಸುವಾಗ ಗೋಡಂಬಿ ಹಣ್ಣುಗಳು ಪರಸ್ಪರ ಡಿಕ್ಕಿಹೊಡೆದು ವಿಚಿತ್ರ ಧ್ವನಿ ಹೊರಡಿಸುವುವು. ಈ ಧ್ವನಿ ಕೇಳಿ ಮೂಲನಿವಾಸಿಗಳು ಭಯಭೀತರಾಗಿ ದೆವ್ವಗಳು ತಮ್ಮ ಭಾಷೆಯಲ್ಲಿ ಮಾತಾಡುತ್ತಿವೆ ಎನ್ನುವರು.

೧೫ನೇ ಶತಮಾನದಲ್ಲಿ ಪೋರ್ಚುಗಲ್‌ದ ಕಾಡುಗಳಲ್ಲಿ ಗೋಡಂಬಿ ಮರಗಳು ಇದ್ದಲ್ಲೆಲ್ಲ ಆದಿವಾಸಿಗಳು ಆ ಮರಗಳ ಸುತ್ತ ಮುಳ್ಳುಬೇಲಿ ಹಾಕಿ ಮನುಷ್ಯರಷ್ಟೇ ಅಲ್ಲ ಪ್ರಾಣಿಗಳೂ ಈ ವಿಷಮಯ ವೃಕ್ಷದಿಂದ ದೂರ ಉಳಿಯುವಂತೆ ಮಾಡುತ್ತಿದ್ದರು.

೧೫ನೇ ಶತಮಾನದ ಅಂತ್ಯದಲ್ಲಿ ದಕ್ಷಿಣ ಅಮೇರಿಕೆಯ ಒಬ್ಬ ಬೇಟೆಗಾರ ಪೋರ್ಚುಗಲ್‌ದ ಆದಿವಾಸಿಗಳ ಸಂಪರ್ಕ ಹೊಂದಿದ. "ನೀವು ಕಾಡಿನಲ್ಲಿ ಬೇಟೆಯಾಡುವಾಗ ಈ ವಿಷವೃಕ್ಷದ ಹತ್ತಿರ ಹೋಗಬೇಡಿ" ಎಂದು ಸರದಾರ ಎಚ್ಚರಿಕೆ ನೀಡಿದ. ಬೇಟೆಗಾರ ಚಕಿತನಾದ. ಆತ ಅದನ್ನು ಪರೀಕ್ಷಿಸಲೆಂದು ಒಂದು ಗೋಡಂಬಿ ಬೀಜವನ್ನು ಕಲ್ಲಿನಿಂದ ಕುಟ್ಟಿ ಒಡೆದು ಅದರ ತಿರುಳನ್ನು ತಿಂದು ನೋಡಿದ. ಅವನಿಗದು ಬಲು ರುಚಿಕರವಾಗಿ ತೋರಿತು. "ಇದೇನೂ ವಿಷಫಲವಲ್ಲ - ಒಳ್ಳೇಫಲ" ಎಂದು ಆತ ಆ ಜನಕ್ಕೆ ತಿಳಿಸಿದ.

ಈ ಬೇಟೆಗಾರನ ಹೆಸರು 'ಕಿರಾಜೂ'. ಗೋಡಂಬಿಗೆ ಆತನ ಹೆಸರನ್ನೇ ಇಡಲಾಯಿತು. ಮುಂದೆ ಆ ಹೆಸರು ಸವೆದು ಸವೆದು 'ಕಾಜೂ' ಆಯಿತು. ಹಿಂದಿಯಲ್ಲಿ ಗೋಡಂಬಿಗೆ ಕಾಜೂ ಎನ್ನುತ್ತಾರೆ.

೧೬ನೇ ಶತಮಾನದಲ್ಲಿ ಬ್ರಾಜೀಲ್‌ದಲ್ಲಿ ಗೋಡಂಬಿ ಬೇಸಾಯ ವ್ಯಾಪಕವಾಗಿ ನಡೆಯತೊಡಗಿತು. ಆಗ ಅದು ಬಂಗಾರಕ್ಕಿಂತಲೂ ಹೆಚ್ಚು ಬೆಲೆ ಬಾಳುತ್ತಿತ್ತು. ಡಕಾಯಿತರು ಚಿನ್ನಕ್ಕಿಂತ ಹೆಚ್ಚಾಗಿ ಗೋಡಂಬಿಯನ್ನೇ ಕೊಳ್ಳೆ ಹೊಡೆಯುತ್ತಿದ್ದರು. ಗೋಡಂಬಿಯ ಕಳ್ಳಸಾಗಣೆಯೂ ನಡೆಯುತ್ತಿತ್ತು.

೧೮ನೇ ಶತಮಾನದ ಆದಿಯಲ್ಲಿ ಭಾರತದಲ್ಲಿ ಇದರ ಬೆಳೆ ಆರಂಭವಾಯಿತು. ಮೊದಮೊದಲು ಸಮುದ್ರತೀರದಲ್ಲಿ ಇದನ್ನು ಬೆಳೆದರೆ ಮುಂದೆ ಬೇರೆಡೆಯಲ್ಲೂ ಇದನ್ನು ಬೆಳೆಸತೊಡಗಿದರು.

ಒಂದು ಒಳ್ಳೆ ಗೋಡಂಬಿಮರ ೧೬ ಮೀಟರ್‌ನಷ್ಟು ಎತ್ತರಕ್ಕೆ ಬೆಳೆಯುವುದು. ಬೀಜ ಬಿತ್ತಿದ ೧೨ ವರ್ಷಗಳ ಮೇಲೆ ಇದು ಫಲ ಕೊಡತೊಡಗುವುದು. ಬೀಜದ ಒಳತಿರುಳು ಬಳಕೆಗೆ ಬರುತ್ತದೆ.

ಒಂದು ಸಮೀಕ್ಷೆಯ ಪ್ರಕಾರ ಭಾರತದಲ್ಲಿ ಪ್ರತಿವರ್ಷ ೬೬ ಸಾವಿರ ಟನ್ ಗೋಡಂಬಿ ಬೆಳೆಯಲಾಗುತ್ತದೆ. ಅರ್ಧಭಾಗ ನಮ್ಮ ದೇಶದಲ್ಲೇ ಖರ್ಚಾಗುತ್ತಿದೆ. ಉಳಿದುದನ್ನು ರಫ್ತು ಮಾಡಿ ಸುಮಾರು ೮೬ ಕೋಟಿ ರೂಪಾಯಿ ವಿದೇಶಿ ವಿನಿಮಯ ಗಳಿಸಲಾಗುತ್ತಿದೆ.

ದಕ್ಷಿಣ ಆಫ್ರಿಕೆಯಲ್ಲೂ ಗೋಡಂಬಿ ಬೆಳೆಯಲಾಗುತ್ತಿದೆ.





ಅಲ್ಲಿ ತರಬೇತಿ ಪಡೆದ ಕೋತಿಗಳು ಗೋಡಂಬಿಯನ್ನು ತೆಗೆದು ತಮ್ಮ ಕೊರಳಿಗೆ ಹಾಕಿದ ಚೀಲದೊಳಗೆ ತುಂಬುತ್ತವೆ. ಚೀಲ ತುಂಬಿದ ಬಳಿಕ ಕೆಳಗಿಳಿದು ಅದನ್ನು ತಮ್ಮ ಮಾಲಿಕನಿಗೆ ಕೊಡುತ್ತವೆ. ಅಲ್ಲಿ ೧೨ ಜಾತಿಯ ಗೋಡಂಬಿ ಮರಗಳಿವೆ.

ಆಫ್ರಿಕೆಯಲ್ಲಿ ಗೋಡಂಬಿ ಹಣ್ಣುಗಳು ದೊಡ್ಡವಾಗಿದ್ದು ಅವುಗಳ ರಸದಿಂದ ಚಾಕ್ಲೆಟ್ ತಯಾರಿಸುತ್ತಾರೆ. ಅಲ್ಲದೆ ಗೋಡಂಬಿಯಿಂದ ಹಲವಾರು ತಿನಿಸುಗಳನ್ನು ಮಾಡುತ್ತಾರೆ. ●

# ಬಂಗಾರದ ಬೆಳೆ ಗೋಡಂಬಿ

ದಿನೇ ದಿನೇ ಗೋಡಂಬಿ ಬೀಜದ ಬೇಡಿಕೆ ಅಧಿಕಗೊಳ್ಳುತ್ತಿರುವುದರಿಂದ ೨೦೦೫ನೇ ಇಸವಿ ವೇಳೆಗೆ ಈಗಿನ ಉತ್ಪಾದನೆಯಾದ ೪.೫ ಲಕ್ಷ ಮೆಟ್ರಿಕ್ ಟನ್‌ನಿಂದ ೧೦ ಲಕ್ಷ ಮೆಟ್ರಿಕ್ ಟನ್ ಉತ್ಪಾದಿಸುವ ಗುರಿ ಇಟ್ಟು ಕೊಂಡು ವ್ಯಾಪಕ ಉತ್ತೇಜನ ಕಾರ್ಯಕ್ರಮ ಹಾಕಿಕೊಳ್ಳಲಾಗಿದೆ.

೧೯೪೦ರ ದಶಕದಲ್ಲಿ ಒಣ ಪ್ರದೇಶದ ಬೆಳೆಯಾಗಿ ಇದನ್ನು ಬೆಳೆಯಲಾರಂಭಿಸಲಾಯಿತು. ಆದರೂ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯ ಹಿನ್ನೆಲೆಯಲ್ಲಿ ಗೋಡಂಬಿ ಬೆಳೆಯನ್ನು ವ್ಯಾಪಕವಾಗಿ ಬೆಳೆಸಲು ಎಲ್ಲಾ ರೀತಿಯ ಉತ್ತೇಜನ ನೀಡಲಾಗುತ್ತಿದೆ. ನಮ್ಮ ದೇಶದಲ್ಲಿಂದ ೬.೫ ಲಕ್ಷ ಹೆಕ್ಟೇರಿಗೂ ಅಧಿಕ ಭೂಮಿಯಲ್ಲಿ ಗೋಡಂಬಿಯನ್ನು ಬೆಳೆಯಲಾಗುತ್ತಿದೆ.

ಗೋಡಂಬಿ ಉದ್ಯಮ ನಮಗೆ ಶೇಕಡ ೧.೫ ರಷ್ಟು ವಿದೇಶಿ ವಿನಿಮಯ ತಂದು ಕೊಡುತ್ತದೆ. ನಮ್ಮ ದೇಶದಿಂದ ಗೋಡಂಬಿಯನ್ನು ೧೯೯೫-೯೬ರಲ್ಲಿ ರಷ್ಯಾ, ಜರ್ಮನಿ, ಫ್ರಾನ್ಸ್, ಜಪಾನ್, ನೆದರ್‌ಲ್ಯಾಂಡ್, ಇಸ್ರೇಲ್, ಅಮೇರಿಕಾ, ಸೌದಿ ರಾಷ್ಟ್ರಗಳಿಗೆ ರಫ್ತು ಮಾಡಲಾಯಿತು. ಆದರೆ ೧೯೯೬ರ ಸಾಲಿನಲ್ಲಿ ನಮ್ಮ ಬೇಡಿಕೆಗೆ ಅನುಗುಣವಾಗಿ ಅಮೇರಿಕಾದಿಂದ ಒಂದೂವರೆ ಲಕ್ಷ ಟನ್ ಗೋಡಂಬಿಯನ್ನು ಆಮದು ಮಾಡಿಕೊಳ್ಳಲಾಯಿತು.

ವಿದೇಶಿ ವಿನಿಮಯ ಆಗರವಾಗಿರುವ ಗೋಡಂಬಿ ಅತ್ಯಂತ ಪೌಷ್ಟಿಕ ಹಾಗೂ ರುಚಿಕರ ಆಹಾರ. ಕಡಿಮೆ ಖರ್ಚಿನಲ್ಲಿ ಆದಾಯ ತರುವಂತಹದ್ದು. ಗುಡ್ಡ ಬೆಟ್ಟಗಳಲ್ಲಿ ಹೆಚ್ಚಿನ ನೀರಿನ ಆಶ್ರಯ ಪಡೆಯದೆಯೂ ಬೆಳೆ ನೀಡುವಂತಹದ್ದು. ಅಲ್ಲದೆ ಈ ಬೆಳೆ ಬೆಳೆಯಲು ಸಾಕಷ್ಟು ಮಾರ್ಗದರ್ಶನ ಹಾಗೂ ಪ್ರೋತ್ಸಾಹ ಕೂಡ ಇದೆ. ರೈತರು ಈ ಬೆಳೆ ಬೆಳೆಯಲು ಉತ್ಸಾಹ ತೋರಿದರೆ ಬರಲಿರುವ ವರ್ಷಗಳಲ್ಲಿ ಅವರಿಗೂ ದೇಶಕ್ಕೂ ಹೇರಳ ಆದಾಯ ಬರುವಂತಾಗುವಲ್ಲಿ ಸಂದೇಹವೇ ಇಲ್ಲ.

ಗೋಡಂಬಿ ಬೀಜದ ಮೇಲಿನ ಹೊರಗಿನ ಗಟ್ಟಿ ಕವಚದಿಂದ ತೆಗೆಯಲಾಗುವ ಗೇರೆಣ್ಣೆ ವಿವಿಧ ಕೈಗಾರಿಕೆ ಹಾಗೂ ಔಷಧಗಳಿಗೆ ಉಪಯೋಗ ಆಗುವುದು. ಗೇರು ಹಣ್ಣಿನಿಂದ ಉಮ್ಮಫ್ರೆನ್ನಿ ಹಾಗೂ ಪಾನೀಯ ಜಾಮುಗಳನ್ನು ತಯಾರು ಮಾಡಲಾಗುತ್ತಿದ್ದು ಇದಕ್ಕೂ ಉತ್ತಮ ಬೇಡಿಕೆ ಇದೆ.

ಒಂದು ಕಾಲದಲ್ಲಿ ಕೇವಲ ಶ್ರೀಮಂತರ ಬಳಕೆಯ ವಸ್ತುವಾಗಿದ್ದ ಗೋಡಂಬಿ ಇಂದು ಜನ ಸಾಮಾನ್ಯರೂ ಬಳಸುವಂತೆ ಪ್ರೋತ್ಸಾಹಿಸಲಾಗುತ್ತಿದೆ. ಇದೊಂದು ಕೇವಲ ರುಚಿಗಾಗಿ ಸಿಹಿ ತಿಂಡಿಗಳಿಗೆ ಉಪಯೋಗಿಸುವ ಪದಾರ್ಥವಾಗಿರದೇ ಪೌಷ್ಟಿಕ ಜೀವಸತ್ವ ಉಳ್ಳದೆಂಬುದನ್ನು ಜನ ಸಾಮಾನ್ಯರಿಗೆ ಪ್ರತಿ ಬಿಂಬಿಸುವ ಪ್ರಯತ್ನ ಕೂಡ ನಡೆದಿದೆ.

'ಗೋಡಂಬಿ ತಿನ್ನಲು ಕೂತವ ಹಡಗು ತಿಂದ' ಎನ್ನುವ ಗಾದೆ ಮಾತು ಹಳ್ಳಿ ಹಳ್ಳಿಗಳಲ್ಲಿ ಪ್ರಚಲಿತವಿದ್ದು ಇದು ಗೋಡಂಬಿ ರುಚಿ ಎಂತಹುದೆಬಯಕ್ಕೆ ಕನ್ನಡಿ ಹಿಡದಂತಿದೆ. ಗೋಡಂಬಿ ಬೀಜದಲ್ಲಿ ಶೇಕಡಾ ೪೭ರಷ್ಟು ಕೊಬ್ಬು ೨೨ರಷ್ಟು ಪ್ರೋಟೀನ್ ೨.೬ ರಷ್ಟು ಖನಿಜಾಂಶ ಹಾಗೂ 'ಬಿ' ಜೀವಸತ್ವ ಒಳಗೊಂಡಿರುತ್ತದೆ.

ಕರ್ನಾಟಕದ ಕರಾವಳಿ ಹಾಗೂ ಮಲೆನಾಡು ಪ್ರದೇಶಗಳಲ್ಲಿ ಗೋಡಂಬಿಯನ್ನು ಹಲವು ವರ್ಷಗಳಿಂದ ಬೆಳೆಯಲಾಗುತ್ತಿದ್ದರೂ ಇದೊಂದು ಪ್ರಮುಖ ವಾಣಿಜ್ಯ ಬೆಳೆ ಎಂಬುದನ್ನು ಪರಿಗಣಿಸದಿದ್ದವರೂ ಹಲವರಿದ್ದಾರೆ. ಇಂತಹವರು ಹಂಗಾಮಿನಲ್ಲಿ ಬೀಜ ಸಂಗ್ರಹಿಸಿ, ಮಳೆಗಾಲದಲ್ಲಿ ಮನೆ ಮಂದಿಯೆಲ್ಲಾ ಕೂತು ತಿಂದು ಮುಗಿಸುತ್ತಾರಷ್ಟೆ. ಸರಿಯಾದ ಕಾವಲು ಕಟ್ಟು ಇಲ್ಲದೇ ಪೋಲಾಗುವುದು ಬೇರೆ, ಅಜ್ಜ ಮುತ್ತಜ್ಜರ ಕಾಲದ ಮರಗಳೇ ಇರುವುದರಿಂದ ಇಳುವರಿ ಕೂಡ ನಿರೀಕ್ಷಿತ ಮಟ್ಟದಲ್ಲಿರುವುದಿಲ್ಲ. ಇದನ್ನೆಲ್ಲಾ ಗಮನಿಸಿದ ಸರ್ಕಾರ ತನ್ನ ೯ನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಉದ್ಯಮಕ್ಕೆ ಹೊಸ ಆಯಾಮ ನೀಡಲು ಮುಂದಾಗಿದೆ.

ರಾಷ್ಟ್ರೀಯ ಗೇರು ಸಂಶೋಧನಾ ಕೇಂದ್ರ, ತೋಟಗಾರಿಕಾ ಇಲಾಖೆ, ಅರಣ್ಯ ಇಲಾಖೆಗಳು ಸಾಂಪ್ರದಾಯಿಕ ಗೋಡಂಬಿ ಕೃಷಿಯನ್ನು ಬದಲಾಯಿಸಿ ಹೆಚ್ಚು ಇಳುವರಿ ಹಾಗೂ ತ್ವರಿತ ಇಳುವರಿ ಬರುವಂತಹ ತಳಿಗಳನ್ನು ರೈತರು ಬೆಳೆಸಲು

ಮಾರ್ಗದರ್ಶನ ನೀಡಲಾಗುತ್ತಿದೆ.

ಸಾಂಪ್ರದಾಯಿಕ ಕೃಷಿ ಪದ್ಧತಿಯಂತೆ ಹೆಕ್ಟೇರ್ ಒಂದರಲ್ಲಿ ಕೇವಲ ೨೦೦ ಗಿಡ ನೆಡಲಾಗುತ್ತದೆ. ಇದನ್ನು ೬೨೫ರವರೆಗೂ ನೀಡಲು ಸಾಧ್ಯವೇ ಎನ್ನುವ ಬಗ್ಗೆ ಸಂಶೋಧನೆ ನಡೆಸಲಾಗುತ್ತಿದ್ದು ಇದು ಯಶಸ್ವಿಯಾದರೆ ರೈತರ ಪಾಲಿಗೆ ವರದಾನವಾಗಲಿದೆ. ಗೋಡಂಬಿ ೨೫ ವರ್ಷ ಆಯುಷ್ಯದ ನಂತರ ಇಳುವರಿ ಕಡಿಮೆ ಆಗುವುದನ್ನು ಗಮನಿಸಿ ಬೆಳೆಸುವವನಿಗೆ ಕಡಿಮೆಯಾದ ಗಿಡ ತೆಗೆಯುವುದರಿಂದ ನಷ್ಟವಾಗದಂತೆ ನೋಡಿಕೊಳ್ಳುವುದೇ ಹೆಚ್ಚು.

**ಗಿಡ ನೆಡುವ ಯೋಜನೆಯ ಹಿನ್ನೆಲೆ**

ಕರ್ನಾಟಕದಲ್ಲಿ ಹಲವಾರು ಸಾಂಪ್ರದಾಯಿಕ ತಳಿಗಳಿದ್ದರೂ ಉತ್ತಮ ಇಳುವರಿ ಕೊಡುವ ಹಾಗೂ ಇಲ್ಲಿನ ವಾತಾವರಣಕ್ಕೆ ಹೊಂದುವ ತಳಿಯನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಉಳ್ಳಾಲದ ಗೇರು ಸಂಶೋಧನಾ ಕೇಂದ್ರ ಬಿಡುಗಡೆ ಮಾಡಿದೆ. ಅವುಗಳಲ್ಲಿ ಪ್ರಮುಖವಾದವು ಉಳ್ಳಾ-೧, ಉಳ್ಳಾಲ-೨ ಇದಲ್ಲದೆ ವೆಂಗುರ್ಲಾ ಮಿಶ್ರತಳಿ-೪, ಬಿ.ಪಿ.ಪಿ.-೧ ಹಾಗೂ ಬಿ.ಪಿ.ಪಿ.-೨ ಹೆಚ್ಚಾಗಿ ಬಳಕೆಯಲ್ಲಿವೆ. ಉತ್ತರ ಕನ್ನಡ ಜಿಲ್ಲೆ ಒಂದರಲ್ಲೇ ೧೫೩.೪ ಹೆಕ್ಟೇರುಗಳಲ್ಲಿ ಗೋಡಂಬಿ ಬೆಳೆಯಲಾಗುತ್ತಿದೆ.

ಗೋಡಂಬಿ ಸಸ್ಯಾಭಿವೃದ್ಧಿಯನ್ನು ಬೀಜದಿಂದ ಹಾಗೂ ಕಸಿ ಪದ್ಧತಿಗಳಿಂದ ಮಾಡಬಹುದು. ಇದರಲ್ಲಿ ಗೂಟಿ ಅಥವಾ ಕಸಿ ವಿಧಾನ ಹೆಚ್ಚು ಶ್ರೇಷ್ಠ ಎಂದು ಪರಿಗಣಿಸಲಾಗಿದೆ. ಹೀಗೆ ತಯಾರಿಸಿದ ೬ ರಿಂದ ೧೨ ತಿಂಗಳ ವಯಸ್ಸಿನ ಸಸಿಗಳು ನಾಟಿಗೆ ಹೆಚ್ಚು ಸೂಕ್ತ. ನಾಟಿಗೆ ಜೂನ್, ಜುಲೈ ತಿಂಗಳು ಸರಿಯಾದ ಕಾಲ. ಉತ್ತಮ ತಳಿಯ ಒಂದು ಗಿಡದಿಂದ ಸರಾಸರಿ ೧೯ ಕೆ.ಜಿ.ಗಳವರೆಗೂ ಬೀಜ ಪಡೆಯಲು ಸಾಧ್ಯ. ಗಿಡದಲ್ಲಿ ಹೂವು ಬಂದಾಗ ಔಷಧಿ ಸಿಂಬರಣೆ ಅಗತ್ಯ. ಅದರಂತೆ ಗೋಡಂಬಿ ಗಿಡದ ಹೊಸ ಚಿಗುರು ಹಾಗೂ ಎಳೆ ಕಾಯಿಗಳಿಗೆ ಮಾರಕವಾಗಿರುವ 'ಟಿ' ಸೊಳ್ಳೆಕಾಟ ಹಾಗೂ ಮರ ಕೊರೆಯುವ ಕೀಟದ ಕಾಟವನ್ನು ತಜ್ಞರ ಸಲಹೆಯಂತೆ ಔಷಧಿ ಉಪಯೋಗಿಸಿ ನಿಯಂತ್ರಿಸುವುದು ಅತ್ಯವಶ್ಯ.

ಏನೇ ಆದರೂ ಗೋಡಂಬಿ ರೈತನಿಗೆ ಒಂದು ವರದಾನ ಬೆಳೆ. ಅವನು ಇದರ ವ್ಯವಸ್ಥಿತ ಬೇಸಾಯ ಹಾಗೂ ಬೆಳೆದ ಬೆಳೆ ಪೋಲಾಗದಂತೆ ಮಾರುಕಟ್ಟೆಗೆ ತರುವ ಕಾರ್ಯ ಕೂಡ ಅಷ್ಟೇ ಅವಶ್ಯಕ. ಹೀಗಾದಾಗ ಈ ಉದ್ದಿಮೆ ಲಾಭ ತರುವಂತಹದ್ದಾಗುವುದರಲ್ಲಿ ಸಂದೇಹವಿಲ್ಲ. ●

**ಶ್ರದ್ಧಾಂಜಲಿ**



**'ಕನ್ನಡ ಕವಿ ಕಾಳಿದಾಸ' ಶ್ರೀ ಮೋಟಗಿ ಮಲ್ಲಿಕಾರ್ಜುನ ಅವರು ಶಿವೈಕ್ಯರಾದರು**

ಸುಪ್ರಸಿದ್ಧ ಶರಣಸಾಹಿತಿಗಳೂ, ಆಧ್ಯಾತ್ಮಜೀವಿಗಳೂ ಆದ ಶ್ರೀ ಮೋಟಗಿ ಮಲ್ಲಿಕಾರ್ಜುನ ಅಥಣಿ ಅವರು ಅಥಣಿಯಲ್ಲಿ ತಮ್ಮ ಸ್ವಗೃಹದಲ್ಲಿ ದಿನಾಂಕ ೨೨.೬.೯೯, ರಂದು ಶಿವಾಧೀನರಾದರು. ಶ್ರೀಯುತರು 'ಸಿದ್ಧಗಂಗಾ' ಪತ್ರಿಕೆಯ ಬರಹಗಾರರಾಗಿದ್ದರಲ್ಲದೆ, ಪೂಜ್ಯ ಸಿದ್ಧಗಂಗಾ ಮಹಾಸನ್ನಿಧಿಯವರಲ್ಲಿ ಅಪಾರ ಭಕ್ತಿ, ವಿಶ್ವಾಸಗಳನ್ನಿರಿಸಿದ್ದರು. ಇತ್ತೀಚೆಗಷ್ಟೇ ಪೂಜ್ಯ ಶಿವಕುಮಾರ ಮಹಾಸ್ವಾಮೀಜಿಯವರು ಅಥಣಿಯ ಮುರುಘೇಂದ್ರ ಶಿವಯೋಗಿಗಳ ಗಚ್ಚಿನ ಮಠಕ್ಕೆ ಸಂದರ್ಶನವಿತ್ತಾಗ, ಶ್ರೀ ಮೋಟಗಿ ಅವರು ಪೂಜ್ಯರ ದರ್ಶನಾಶೀರ್ವಾದ ಪಡೆದಿದ್ದರು.

ಶ್ರೀಯುತರು 'ಲಿಂಗವಿಲಾಸ', 'ಅಃತಪುರ ಗೀತೆ', 'ಆತ್ಮಸ್ವಾತಂತ್ರ್ಯ', 'ಶಿವಾನುಭವ ದರ್ಪಣ', 'ಧರ್ಮ ರಹಸ್ಯ' ಎಂಬ ಐದು ಚಂಪೂ ಕಾವ್ಯಗಳನ್ನು ರಚಿಸಿದ್ದರು. 'ದೇವ ಪುರುಷರ ಚರಿತ್ರಾಮೃತ' ಹಾಗೂ 'ವೀರಶೈವ ವಿಭೂತಿಗಳು' ಎಂಬ ತ್ರಿಪದಿ ಕಾವ್ಯ ಹಾಗೂ 'ವೀರಶೈವ ವಿಭೂತಿಗಳು' ಎಂಬ ಮಹಾತ್ಮರ ಚಾರಿತ್ರಿಕ ಗ್ರಂಥಗಳ ಕತೃಗಳೂ ಅವರಾಗಿದ್ದರು.

ಅವರ ಸಾಹಿತ್ಯ ಸೇವೆಯನ್ನು ಮೆಚ್ಚಿ ಚಿತ್ರದುರ್ಗದ ಪೂಜ್ಯ ಮಲ್ಲಿಕಾರ್ಜುನ ಜಗದ್ಗುರುಗಳು, ಗದಗನ ಜ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಸನ್ಮಾನಿಸಿದ್ದರು. ಅಥಣಿ ಮೋಟಗಿ ಮಠದ ಶ್ರೀ ಚೆನ್ನಬಸವ ಸ್ವಾಮಿಗಳು 'ಕವಿರತ್ನ' ಪ್ರಶಸ್ತಿಯನ್ನಿತ್ತು ಗೌರವಿಸಿದ್ದರು. ಶ್ರೀಯುತರು ಅಥಣಿಯ ಸಾಹಿತ್ಯ ಸಾಂಸ್ಕೃತಿಕ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು. ೮೦ ವರ್ಷಗಳ ತುಂಬುಜೀವನ ನಡೆಸಿದ ಶ್ರೀ ಮೋಟಗಿ ಅವರದು ಸಂಪೂರ್ಣ ಶರಣ ಜೀವನವಾಗಿತ್ತು.

ಭಗವಂತನು ಅವರ ಆತ್ಮಕ್ಕೆ ಗೌರವಾತ್ಮಕ ಶರಣಾರ್ಥಿಗಳನ್ನು 'ಸಿದ್ಧಗಂಗಾ' ಸಲ್ಲಿಸುತ್ತದೆ.





# ಧರ್ಮ : ಒಂದು ವಿಚಾರ

**- ಈರಯ್ಯ ಕಿಲ್ಲೇದಾರ, ಗುಡಿಕಟ್ಟಿ**
ತಾ. ಬೈಲಹೊಂಗಲ

ನಮ್ಮ ಭಾರತ ದೇಶವು ಧರ್ಮಭೂಮಿ ಎಂದೆನಿಸಿದೆಯಷ್ಟೆ; ಇತಿಹಾಸ ಪೂರ್ವಕಾಲದಿಂದಲೂ ಇಲ್ಲಿ ಉಚ್ಚ ಧರ್ಮಾಚರಣೆಯು ನೆಲೆಯೂರಿ ಪಲ್ಲವಿಸುತ್ತ ಬಂದಿದೆ. ಕಾಲಕಾಲಕ್ಕೆ ಅನೇಕ ಧಾರ್ಮಿಕ ಸಂತರು ಶರಣರು ಉದಯಿಸಿ ಈ ಧರ್ಮವೃಕ್ಷವನ್ನು ಬೆಳೆಸುತ್ತ ಬಂದಿದ್ದಾರೆ. ಆದುದರಿಂದಲೇ ಭಾರತದ ಹಳ್ಳಿ ಹಳ್ಳಿಗಳಲ್ಲಿ ಕೂಡಾ ಧರ್ಮಜ್ಞಾನವುಳ್ಳಂಥ ಅನೇಕ ವ್ಯಕ್ತಿಗಳನ್ನು ನಾವು ಈಗಲೂ ಕಾಣಬಹುದು.

ಭಾರತದ ವಿವಿಧೆಡೆಗಳಲ್ಲಿ ವಿವಿಧ ಧರ್ಮಸಂಪ್ರದಾಯಗಳನ್ನು ನಾವು ಕಾಣುತ್ತೇವೆ. ಆದರೆ ಅವೆಲ್ಲವುಗಳ ಮೂಲವನ್ನು ನಾವು ಕಂಡುಕೊಂಡಲ್ಲಿ ಎಲ್ಲವೂ ಮಾನವೀಯತೆ ಎಂಬ ಮೂಲ ಧರ್ಮದ ಮೇಲೆಯೇ ನಿಂತಿವೆಯೆಂಬುದು ವಿದಿತವಾಗುತ್ತದೆ. ಮಾನವೀಯತೆಯನ್ನು ಬೋಧಿಸದ ಧರ್ಮವೇ ಭಾರತದಲ್ಲಿಲ್ಲವೆನ್ನಬಹುದು. ಲಿಂಗವಂತ ಧರ್ಮವಂತೂ ಮಾನವೀಯತೆಯೇ ಧರ್ಮದ ಮೂಲ ಎಂದು ಸ್ಪಷ್ಟವಾಗಿ ಘೋಷಿಸಿದೆ. ಲಿಂಗವಂತ ಧರ್ಮಸ್ಥಾಪಕರಾದ ಶ್ರೀ ಬಸವಣ್ಣನವರು "ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲಪ್ರಾಣಿಗಳಲ್ಲಿ, ದಯವೇ ಧರ್ಮದ ಮೂಲವಯ್ಯ" ಎಂದು ಸಾರಿದ್ದಾರೆ.

ಈ ರೀತಿ ಸಕಲಪ್ರಾಣಿಗಳಲ್ಲಿ ದಯೆ, ಅನುಕಂಪ, ಸೇವಾಭಾವನೆ, ಸಕಲರೂ ಸಮಾನರೆಂಬ ಕಲ್ಪನೆ, ಯಾವ ಧರ್ಮ ಬೋಧಿಸುತ್ತದೆಯೊ ಅದೇ ನಿಜವಾದ ಧರ್ಮವೆನ್ನಬೇಕು. ಇಂಥ ವಿಶಾಲ ಭಾವನೆಯುಳ್ಳ ಧರ್ಮಿಷ್ಠರು ಎಂದೂ ಅತ್ಯಾಸೆಗೆ ಒಳಗಾಗುವವರಲ್ಲ. ಎರಡನೆಯವರನ್ನು ಸುಲಿಗೆ ಮಾಡಿ ತಮ್ಮ ಬಾಳನ್ನು ಬೆಳೆಸಬೇಕೆಂಬ ಭಾವನೆಯು ಎಂದೂ ಅವರಲ್ಲಿ ಸುಳಿಯಲಾರರು. ಎಲ್ಲರೊಡನೆಯೂ ಅವರು ಸತ್ಯ ಮತ್ತು ಶಾಂತಿಪೂರ್ವಕ ವರ್ತಿಸುವುದರಿಂದ ಎಲ್ಲರ ಜೀವನವು ಸುಖಮಯವಾಗುತ್ತದೆ.

ಇಂಥ ಉದಾತ್ತ ಧರ್ಮಭಾವನೆ ಬಿಟ್ಟು ತೋರಿಕೆಗಾಗಿ ಧರ್ಮಿಷ್ಠರಂತೆ ವರ್ತಿಸುತ್ತ ಪ್ರಸಂಗ ಬಂದಲ್ಲಿ ಹೆರವರನ್ನು ಧರ್ಮದ ಸೋಗಿನಲ್ಲಿ ವಂಚಿಸುತ್ತ ಯಾವನು ಹೋಗುತ್ತಾನೆಯೋ ಅವನಿಗೆ ಯಾರೂ ಧರ್ಮಿಷ್ಠನೆಂದು ಅನ್ನಲಾರರು. ಇಂಥ ಕುಟಿಲ ಧರ್ಮಿಗಳು ಕಾಲಕಾಲಕ್ಕೂ ಇದ್ದವರೇ. ಆದರೂ ಸಾಧು ಸತ್ಪುರುಷರು ಅಲ್ಲಲ್ಲಿ ಜನ್ಮತಾಳಿ ತಾವು ತೊಂದರೆಗೆ ಈಡಾದರೂ ಲೆಕ್ಕಿಸದೆ ಇಂಥ ಕುಟಿಲ ಧರ್ಮಿಗಳ ಡಂಭಾಚಾರಗಳನ್ನು ಬಹಿರಂಗವಾಗಿ ಖಂಡಿಸಿದ್ದಾರೆ. ಮಹಾತ್ಮಾ ಬಸವೇಶ್ವರರು ಈ ಬಗ್ಗೆ ಒಂದು ಮಾರ್ಮಿಕ ವಚನವನ್ನು ಹೀಗೆ ಹೇಳಿದ್ದಾರೆ.

**ಕಲ್ಲನಾಗರ ಕಂಡರೆ ಹಾಲನೆರೆಯೆಂಬರು ।**
**ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ ।**
**ಉಂಬುವ ಜಂಗಮ ಬಂದರೆ ನಡೆ ಎಂಬರು**
**ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ ।**
**ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನ**
**ಮಾಡಿದರೆ ಕಲ್ಲುತಾಗಿದ ಮಿಟ್ಟೆಯಂತಪ್ಪರಯ್ಯ ॥**

ಇದಕ್ಕಾಗಿ ಶರಣರ ಆಚರಣೆಯಿಂದಲೇ ನಿಜವಾದ ಧರ್ಮದ ಸ್ವರೂಪವನ್ನು ಕಾಣಬೇಕೆಂದು ಬಸಣ್ಣನವರು ಬಯಸಿದ್ದಾರೆ.

ನಿಜವಾದ ಧರ್ಮದ ಬುನಾದಿ ನೀತಿಯೇ ಆಗಿರುತ್ತದೆ. ನೀತಿ ಎಂತಹದಿರಬೇಕೆಂಬುದನ್ನು ಬಸವಣ್ಣನವರ ಈ ವಚನ ಸ್ಪಷ್ಟವಾಗಿ ಹೇಳುತ್ತದೆ -

**ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ ।**
**ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ ।**
**ತನ್ನ ಬಣ್ಣಿಸಬೇಡ, ಇದಿರಹಳಿಯಲು ಬೇಡ ।**
**ಇದೇ ಅಂತರಂಗ ಶುದ್ಧಿ; ಇದೇ ಬಹಿರಂಗ ಶುದ್ಧಿ ।**
**ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ ॥**

ದೇವನು ಒಲಿಯಬೇಕಾದರೆ ಇಂಥ ಸದಾಚರಣೆ ಅಳವಟ್ಟಿರಬೇಕೆಂದು ಬಸವಣ್ಣನವರು ನಿಜವಾದ ದರ್ಮದ ಸ್ವರೂಪವನ್ನು ವಿವರಿಸಿದ್ದಾರೆ.

ನಿಜವಾದ ಧರ್ಮದಲ್ಲಿ ದಯವೇ ಧರ್ಮದ ಮೂಲ ಅಥವಾ ಬೇರು ಆಗಿರುತ್ತದೆ. ಅಂದರೆ ಅಹಿಂಸಾಭಾವನೆಯೇ ಧರ್ಮದ ಅಡಿಗಲ್ಲಾಗಿರುತ್ತದೆ. ದಯಾ, ಪ್ರೇಮ, ಅಹಿಂಸಾ ಭಾವನೆಗಳಿಲ್ಲದೆ ಹೋದರೆ ಅನ್ಯಾಯ, ಅತ್ಯಾಚಾರ ಹಾಗೂ ಹಿಂಸೆಗಳು ಎಲ್ಲರಲ್ಲಿ ಪ್ರಬಲಗೊಳ್ಳುವವು. ಆಗ

ಮಾನವೀಯತೆಯು ಕಮರಿಹೋಗಿ ಸಕಲಪ್ರಾಣಿಗಳೂ ದುಃಖಕ್ಕೆ, ದುರ್ವರ್ತನೆಕ್ಕೆ ಒಳಗಾಗುವವು. ಅದಕ್ಕಂತೆಯೇ "ಸಕಲಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು" ಎಂದು ಹೇಳಿದುದರಲ್ಲಿ ವಿಶಾಲ ಮನೋಭಾವವುಳ್ಳನೇ ಕುಲಜನಲ್ಲದೆ ಅಂಥ ಮನೋಭಾವ ಇಲ್ಲದವನು ತನ್ನ ಕುಲದ ಹಿರಿಮೆ ಎಷ್ಟೇ ತೋಡಿಕೊಂಡರೂ ಆತ ಕುಲಜನಾಗದೆ ಅಂತ್ಯಜನೆಂದು ಅವರು ವ್ಯಕ್ತಪಡಿಸಿದ್ದಾರೆ.

ಧರ್ಮದ ನಿಜವಾದ ಕಲ್ಪನೆ ಇಲ್ಲದ್ದರಿಂದ ಅನೇಕರು ಶುಷ್ಕ ಸಂಪ್ರದಾಯಗಳೇ ಧರ್ಮವೆಂದು ತಪ್ಪು ತಿಳಿದುಕೊಂಡು ಮೂಢನಂಬಿಕೆಗೆ ಬಲಿಯಾಗುತ್ತಾರೆ. ಜೀವಂತ ನಾಗರ ಕಂಡರೆ ಕೊಲ್ಲು ಕೊಲ್ಲು ಎಂದು ಓಡಾಡುವಂಥವರು ಕಲ್ಲು ನಾಗರಕ್ಕೆ ಹಾಲನೆರೆಯುವುದು ಎಂಥ ಮೂಢತನವೆಂದು ಪ್ರತಿಯೊಬ್ಬನೂ ತಿಳಿಯಬೇಕು. ನಿಜವಾದ ಧರ್ಮದ ಅರಿವು ಮೂಡಬೇಕಾದರೆ ಸಮಾಜದಲ್ಲಿ ಬೇರೂರಿಸುವ ಮತ್ತು ಅರಿತರೂ ಸಂಪ್ರದಾಯಬದ್ಧರಾಗಿ ಆಚರಿಸಲ್ಪಡುತ್ತಿರುವ ಅನೇಕ ಮೂಢನಂಬಿಕೆಗಳನ್ನು ಜನರು ಬಿಟ್ಟುಬಿಡಬೇಕು. ವಿವೇವಕ್ಕೆ ಸರಿಹೊಂದದಂಥ ಕ್ರಮಗಳನ್ನು ಪಾಲನೆ ಮಾಡುವುದರಿಂದ ಶುದ್ಧ ಅವಿವೇಕತನವೇ ನಮ್ಮನ್ನು ಹುಡುಕಿಕೊಂಡು ಬರುತ್ತದೆ. ಆದ್ದರಿಂದ ಧರ್ಮದ ವೇಷದಲ್ಲಿ ಮತ್ತು ಧರ್ಮದ ಪೋಷಣೆಯಲ್ಲಿ ಬಂದಿರುವ ಅನೇಕ ಮೂಢನಂಬಿಕೆ ಮತ್ತು ಆಚರಣೆಗಳನ್ನು ಬಿಟ್ಟು ಜನರು ಸಾರಾಸಾರ ವಿಚಾರ ಮಾಡಲು ಮೊದಲು ಮುಂದಾಗಬೇಕು.

ಧರ್ಮದ ನಿಜಸ್ವರೂಪವು ಹೇಗೆ ಗೋಚರವಾಗುತ್ತಿದೆ ಎಂಬ ಬಗ್ಗೆ ಮಹಾತ್ಮಾ ಗಾಂಧಿಯವರು ಒಂದು ವಿಧಾನ ಗೊತ್ತುಪಡಿಸಿದ್ದಾರೆ. "ಆತ್ಮದೃಷ್ಟಿ ಇರಿಸಿಕೊಂಡು ಆಚರಿಸುವ ನೀತಿಯೇ ಧರ್ಮ" ಎಂದು ಅವರು ಹೇಳಿದ್ದುಂಟು. ಆತ್ಮದೃಷ್ಟಿ ಎಂದರೆ ಎಲ್ಲರೂ ಸಮಾನರೆಂಬ ದೃಷ್ಟಿ. ಈ ರೀತಿ ಎಲ್ಲರೊಡನೆ ನೀತಿಯಿಂದ ನಡೆದುಕೊಳ್ಳಬೇಕೆನ್ನುವವರು ಎಂದೂ ಪರಭಕ್ಷಕರಾಗಲಾರರು. ಸತ್ಯ ಮತ್ತು ಅಹಿಂಸೆ ಧರ್ಮವೆಂಬ ನಾಣ್ಯದ ಎರಡು ಪಾರ್ಶ್ವಗಳೆಂದೂ ಒಂದು ಬಿಟ್ಟು ಇನ್ನೊಂದು ಅಗಲಿ ಇರಲಾರವೆಂದೂ ಮಹಾತ್ಮಾ ಗಾಂಧಿಯವರು ಧರ್ಮದ ನಿಜಸ್ವರೂಪವನ್ನು ಕಂಡುಕೊಂಡಿದ್ದರು.

ಇಂಥ ಧರ್ಮವನ್ನು ನಂಬಿದವನು ಮಾನವ ಧರ್ಮಿಯೇ ಹೊರತು ಬೇರೇನೂ ಅಲ್ಲ. ಈಗ ಜಗತ್ತಿನಲ್ಲಿ ನಾನಾ ಧರ್ಮಗಳುಂಟಾಗಿ ನನ್ನ ಧರ್ಮ ಹೆಚ್ಚಿನದು. ನಿನ್ನ ಧರ್ಮ ಕಡೆಯದು ಎಂದು ಸೆಣಸ್ಯಾಟ ನಡೆಯುತ್ತದೆ. ಧರ್ಮದ ಹೆಸರಿನಲ್ಲಿಯೇ ಯುದ್ಧಗಳಾಗಿವೆ! ಧರ್ಮ ಮತ್ತು ಯುದ್ಧ ಎಂಬವು ಪರಸ್ಪರ ವಿರೋಧಿ ಅರ್ಥದ ಶಬ್ದಗಳಾಗಿದ್ದರೂ "ಜಿಹಾದ್" ಅಥವಾ "ಕ್ರೂಸೇಡ್" ಎಂದು ಧರ್ಮಯುದ್ಧಕ್ಕೆ ಹೆಸರು ಕೊಡಲಾಗಿತ್ತು. ಒತ್ತಾಯ, ಒಲುಮೆ, ಆಶೆ, ರೋಷ, ಕೊಲೆಗಳ ಮೂಲಕ ಧರ್ಮ ತಮ್ಮದೇ ಧರ್ಮ ಬೆಳೆಸಬೇಕೆಂಬ ಹುಚ್ಚು ಆಗಲೂ ಇತ್ತು. ಈಗಲೂ ಅಲ್ಲಲ್ಲಿ ಕಂಡುಬರುತ್ತದೆ. ಇದು ಅಧರ್ಮಪ್ರಸಾರವೇ ಸರಿ. ಆದರೂ ಜಗತ್ತಿನಲ್ಲಿ ತಿಳುವಳಿಕೆಯುಳ್ಳಂಥವರು ಇಂಥ ಮಾರ್ಗಕ್ಕೆ ಪ್ರೋತ್ಸಾಹಕೊಟ್ಟು ಧರ್ಮದ ಬಗ್ಗೆ ದುರಹಂಕಾರ, ಗಾಢಾಂಧಕಾರ ಬೆಳೆಸಿದ್ದಾರೆ.

ಇಂಥ ಅಂಧಕಾರದಲ್ಲಿಯೇ ನಾವು ವಿವೇಕವೆಂಬ ಜ್ಞಾನದ ಕಣ್ಣಿನಿಂದ ಧರ್ಮದ ನಿಜಸ್ವರೂಪ ಕಂಡು ಹಿಡಿಯಬೇಕು. ಯಾವ ಧರ್ಮಕ್ಕೆ ಸರ್ವಸಮಾನತೆ, ದಯೆ, ನೀತಿ ಇವು ಆಧಾರವಾಗಿವೆಯೊ ಅದು ನಿಜವಾದ ಧರ್ಮ. ಯಾವ ಧರ್ಮ ಸತ್ಯ, ಸತ್ಪ್ರೇಮ, ಸದಾಚಾರ ಸತ್ಕಾರ್ಯಗಳ ಬೆನ್ನಲುಬುಳ್ಳದ್ದಾಗಿದೆಯೋ ಅದು ನಿಜವಾದ ಧರ್ಮ. ಮಾನವೀಯತೆಯನ್ನು ಎತ್ತಿ ತೋರಿಸುವುದು ಧರ್ಮದ ನಿಜವಾದ ಸ್ವರೂಪ. ಇದಿಲ್ಲದೆ ಬೇರೆ ಹಲವಾರು ವಿಕಾರಗಳಿಂದ ಪ್ರಕಟವಾಗುವ ಧರ್ಮ ನಿಜವಾದ ಧರ್ಮವಲ್ಲ. ಅದು ಅಧರ್ಮವೇ ಸರಿ.

ಸುಖ ಉಂಟಾದಾಗ ಸೇವಿಸಬೇಕು, ಹಾಗೆಯೇ ದುಃಖವಾದಾಗಲೂ ಅನುಭವಿಸಬೇಕು. ದುಃಖ-ಸುಖಗಳೆರಡೂ ಗಾಲಿಯಂತೆ ತಿರುಗುತ್ತಿರುತ್ತವೆ. ಒಮ್ಮೆ ದುಃಖ ಬಂದರೆ, ಇನ್ನೊಮ್ಮೆ ಸುಖ. ಹೀಗೆ ಮನುಷ್ಯನು ನಿರಾಸಕ್ತನಾಗಲು ಕಲಿಯಬೇಕು.

-- ಭಾಮಿನೀವಿಲಾಸ

ದೃಷ್ಟಿ ಪರೀಕ್ಷಿಸಿ ನೋಡಿ ಹೆಜ್ಜೆಯನ್ನಿಡಬೇಕು. ನೀರು ಕುಡಿಯುವಾಗ ಬಟ್ಟೆಯಿಂದ ಸೋಸಿ ಕುಡಿಯಬೇಕು. ಮಾತಾಡುವಾಗ ಶಾಸ್ತ್ರ-ನೀತಿಗಳನ್ನು ಅನುಲಕ್ಷಿಸಿ ಮಾತಾಡಬೇಕು. ಯಾವುದೇ ಕೆಲಸವನ್ನು ಶುದ್ಧ ಮನಸ್ಸಿನಿಂದ ಎಸಗಬೇಕು.

– ಸುಭಾಷಿತ





**ನಿಮಗೆ ತಿಳಿದಿದೆಯೇ?**

## ನೀರಿನಿಂದ ಹರಡುವ ರೋಗಗಳು

ಸಕಲ ಜೀವರಾಶಿಗಳಿಗೆ ನೀರು ಅತ್ಯಾವಶ್ಯಕ. ಹಿಂದಿನಿಂದಲೂ ನೀರಿಗೆ ಜೀವಜಲವೆಂಬ ಪೂಜ್ಯಭಾವನೆ ಜನರಲ್ಲಿದೆ. ಅಂದಮೇಲೆ ಕುಡಿಯುವ ನೀರು ಮನುಷ್ಯನಿಗೆ ಸುರಕ್ಷಿತವಾಗಿರಬೇಕು ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಕುಡಿಯುವ ನೀರು ಕಲುಷಿತವಾದರೆ ಅನೇಕ ರೋಗಗಳು ಹರಡುತ್ತವೆಂಬುದು ಗ್ರಾಮಾಂತರ ಪ್ರದೇಶದಲ್ಲಿ ಬಹಳ ಜನರಿಗೆ ತಿಳಿದಿರುವುದಿಲ್ಲ.

**ಕುಡಿಯುವ ನೀರಿನ ಮೂಲಗಳು :** ಹಳ್ಳ, ನದಿ, ಕೆರೆ, ಬಾವಿ, ಕೊಳವೆಬಾವಿ

**ಸಂಗ್ರಹಿಸಿದ ನೀರು ಅಶುದ್ಧವೆಂದು ಸಂಶಯವಿದ್ದಲ್ಲಿ ಅದನ್ನು ಸೋಸಿ, ಚೆನ್ನಾಗಿ ಕುದಿಸಿ, ಆರಿಸಿ ಕುಡಿಯಿರಿ.**



**ನೆನಪಿರಲಿ**

ನೀರಿನ ಮೂಲಗಳ ಹತ್ತಿರ ಮಲ ವಿಸರ್ಜನೆ ಮಾಡಬಾರದು.

ಕುಡಿಯುವ ನೀರಿನಲ್ಲಿ ಹೊಲಸಾದ ಕೈಗಳನ್ನು ಅದ್ದಬಾರದು.

**ನೀರಿನಿಂದ ಹರಡುವ ರೋಗಗಳು ಯಾವುವು?**

ಅತಿಸಾರ (ವಾಂತಿ ಭೇದಿ), ಕಾಲರಾ, ರಕ್ತಭೇದಿ, ಆಮಶಂಕೆ, ಟೈಫಾಯ್ಡ್, ಕಾಮಾಲೆ (ಜಾಂಡಿಸ್), ಪೋಲಿಯೊ, ಚರ್ಮರೋಗ, ಜಂತುಹುಳು, ಇತ್ಯಾದಿ.

**ಕುಡಿಯುವ ನೀರು ಕಲುಷಿತವಾಗುವುದು ಹೇಗೆ?**

- ನೀರಿನ ಮೂಲಗಳ ಹತ್ತಿರ ಮಲವಿಸರ್ಜನೆ ಮಾಡುವುದರಿಂದ.
- ದನಕರುಗಳನ್ನು, ಪಾತ್ರೆಗಳನ್ನು, ಬಟ್ಟೆಗಳನ್ನು ತೊಳೆಯುವುದರಿಂದ.
- ಮಲವಿಸರ್ಜನೆಯ (ಪಾಯಖಾನೆಯ) ನಂತರ ನೀರಿನ ಮೂಲಗಳಾದ ನದಿ, ಹಳ್ಳ, ಕೆರೆ, ಬಾವಿ, ಕೊಳವೆಬಾವಿಗಳ ಹತ್ತಿರವೇ ತೊಳೆಯುವುದರಿಂದ.
- ನಲ್ಲಿಯ ಪೈಪುಗಳು ಒಡೆದು ಚರಂಡಿ / ಗಟಾರಿನ ನೀರು ಒಳ್ಳೆಯ ನೀರಿನ ಜೊತೆ ಸೇರಿದಾಗ.
- ಹೊಲಸಾದ ಕೈಗಳನ್ನು ಕುಡಿಯುವ ನೀರಿನಲ್ಲಿ ಅದ್ದುವುದರಿಂದ.
- ಕುಡಿಯುವ ನೀರು ಶೇಖರಿಸುವ ಪಾತ್ರೆಗಳನ್ನು ಮುಚ್ಚದೆ ಇಡುವುದರಿಂದ
- ಕೊಳೆತ ಕಸ ಕಡ್ಡಿಗಳು ಬಯಲಿನಲ್ಲಿರುವ ಮಲವು ನೀರಿಗೆ ಸೇರುವುದರಿಂದ
- ಮಣ್ಣಿನಲ್ಲಿರುವ ಜಂತು ಹುಳುಗಳ ಮೊಟ್ಟೆಗಳು ಧೂಳಿನ ಮೂಲಕ ನೀರಿಗೆ ಸೇರಿದಾಗ ಇತ್ಯಾದಿ.

## ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ಮಾರಕ

# ಜನಸಂಖ್ಯಾ ಸ್ಫೋಟ

- ಎಚ್.ಎಸ್. ಸಿದ್ಧಗಂಗಪ್ಪ
೫೩/೧, 'ಶಿವಕೃಪ', ಮೊದಲನೇ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ - 40



ಜನಸಂಖ್ಯೆ ದೇಶದ ಸಂಪತ್ತು ನಿಜ, ಆದರೆ ಅದು ಮಿತಿಯಲ್ಲಿದ್ದರೆ ಸಂಪತ್ತು. ಮಿತಿಮೀರಿದರೆ ಆಪತ್ತು. ಭಾರತ ಮಿತಿಮೀರಿದ ಜನಸಂಖ್ಯೆಯಿಂದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಇಂದು ಒಂದು ಬೃಹತ್ ಸಮಸ್ಯೆಯಾಗಿ ಕಾಡುತ್ತಿರುವ ಜನಸಂಖ್ಯೆ ಎಲ್ಲಾ ಸಮಸ್ಯೆಗಳಿಗೆ ತಾಯಿಬೇರು. ಆಹಾರ, ವಸತಿ, ಶಿಕ್ಷಣ, ಆರೋಗ್ಯ, ಸಾರಿಗೆ, ನಿರುದ್ಯೋಗ, ಪರಿಸರ ಇತ್ಯಾದಿ ಮೂಲಭೂತ ಸಮಸ್ಯೆಗಳಿಗೆ ಕ್ಷಣಕ್ಷಣಕ್ಕೂ ಹೆಚ್ಚುತ್ತಿರುವ ಜನಸಂಖ್ಯೆಯೇ ಕಾರಣ. ಜನಸಂಖ್ಯಾ ಸಮಸ್ಯೆ ಕೇವಲ ಭಾರತಕ್ಕೆ ಸೀಮಿತವಾಗಿಲ್ಲ. ಅದು ಇಡೀ ವಿಶ್ವದ ಸಮಸ್ಯೆಯಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಪಂಚವಾರ್ಷಿಕ ಯೋಜನೆಗಳ ಮೂಲಕ ದೇಶದ ಸರ್ವಾಂಗೀಣ ಅಭಿವೃದ್ಧಿಗೆ ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮರೋಪಾದಿಯಲ್ಲಿ ಕಾರ್ಯೋನ್ಮುಖವಾದರೂ ನಿರೀಕ್ಷಿತ ಮಟ್ಟದಲ್ಲಿ ಪ್ರಗತಿಯಾಗದಿರುವುದಕ್ಕೆ ದಿನೇದಿನೇ ಬೆಳೆಯುತ್ತಿರುವ ಜನಸಂಖ್ಯೆ ಅಡ್ಡಿಯಾಗಿದೆ.

ಅಭಿವೃದ್ಧಿಯ ಫಲವನ್ನು ನಿರರ್ಥಕಗೊಳಿಸುತ್ತಿರುವ ಜನಸಂಖ್ಯಾ ಬೆಳವಣಿಗೆಯತ್ತ ಜನರ ಗಮನ ಸೆಳೆಯುವ ದೃಷ್ಟಿಯಿಂದ ಪ್ರತಿವರ್ಷ ಜುಲೈ ೧೧ರಂದು ವಿಶ್ವ ಜನಸಂಖ್ಯಾ ದಿನವನ್ನಾಗಿ ಆಚರಿಸಲಾಗುತ್ತಿದೆ.

ಜನಸಂಖ್ಯಾ ಬೆಳವಣಿಗೆಗೆ ಕಾರಣ ಒಂದಲ್ಲ; ಎರಡಲ್ಲ. ಅನಕ್ಷರತೆ, ಕಡು ಬಡತನ, ಮೂಢನಂಬಿಕೆ, ಗಂಡುಮಕ್ಕಳ





ಬಯಕೆ, ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡುವುದು ಇತ್ಯಾದಿ ಅಂಶಗಳು ಜನಸಂಖ್ಯಾ ಬೆಳವಣಿಗೆಗೆ ಪೋಷಕವಾಗಿವೆ. ಭಾರತದ ಜನಸಂಖ್ಯೆ ೧೯೮೧ರಲ್ಲಿ ೬೮ ಕೋಟಿ ೫೮ ಲಕ್ಷ ಇದ್ದದ್ದು, ೧೯೯೧ರ ಜನಗಣತಿಯ ಪ್ರಕಾರ ೮೪ ಕೋಟಿ ೪೦ ಲಕ್ಷ ಜನ ಆಗಿದೆ. ತಜ್ಞರ ಅಂದಾಜಿನಂತೆ ಪ್ರತಿವರ್ಷ ಸುಮಾರು ೧ ಕೋಟಿ ೪೦ ಲಕ್ಷ ಜನ ಹೆಚ್ಚುವರಿಯಾಗಿ ಸೇರುತ್ತಿದ್ದಾರೆ. ಕರ್ನಾಟಕದಲ್ಲಿ ೧೯೮೧ರಲ್ಲಿ ೩ ಕೋಟಿ ೭೦ ಲಕ್ಷ ಇದ್ದರೆ ೧೯೯೧ರಲ್ಲಿ ೪ ಕೋಟಿ ೪೮ ಲಕ್ಷ ಆಗಿದೆ. ದೇಶದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯ ಪರಿಣಾಮವಾಗಿ ಪ್ರತಿವರ್ಷ ೧ ಲಕ್ಷ ೨೦ ಸಾವಿರ ಶಾಲೆಗಳು, ೩ ಲಕ್ಷ ೩೦ ಸಾವಿರ ಶಿಕ್ಷಕರು, ೨೨ ಲಕ್ಷ ಮನೆಗಳು, ೧೮ ಲಕ್ಷ ೭೦ ಸಾವಿರ ಮೀಟರ್ ಬಟ್ಟೆ, ಒಂದು ಕೋಟಿ ೧೧ ಲಕ್ಷ ಕ್ವಿಂಟಾಲ್ ಆಹಾರಧಾನ್ಯ ಬೇಕಾಗುತ್ತದೆ. ಇದರ ಜೊತೆಗೆ ೩೫ ಲಕ್ಷ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಸೃಷ್ಟಿಸಬೇಕಾಗುತ್ತದೆ.

ಸರ್ಕಾರ ಜನಸಂಖ್ಯಾ ಸಮಸ್ಯೆಯನ್ನು ನಿವಾರಿಸುವಲ್ಲಿ ದೃಢ ಹೆಜ್ಜೆಯನ್ನಿಟ್ಟಿದೆ. ಜನಸಂಖ್ಯಾ ನಿಯಂತ್ರಣಕ್ಕೆ ಹಲವಾರು ನಿರ್ದಿಷ್ಟ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಾ ಬಂದಿದೆ. ರಾಷ್ಟ್ರೀಯ ಕುಟುಂಬ ಕಲ್ಯಾಣ ಕಾರ್ಯಕ್ರಮವು ಕಳೆದ ನಾಲ್ಕು ದಶಕಗಳಲ್ಲಿ ಜನಮನವನ್ನು ಸ್ಪಂದಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡುತ್ತಿದೆ. ದಂಪತಿಗಳಿಗೆ ತಮ್ಮ ಕುಟುಂಬದ ಗಾತ್ರ ಹಾಗೂ ಮಕ್ಕಳ ನಡುವಿನ ಅಂತರವನ್ನು ಕಾಪಾಡಿಕೊಳ್ಳುವಲ್ಲಿ ಉಪಯುಕ್ತ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಯಾವುದೇ ರೀತಿಯ ಒತ್ತಾಯವನ್ನು ದಂಪತಿಗಳ ಮೇಲೆ ಹೇರದೆ ವ್ಯಕ್ತಿಗಳಿಗೆ ಹಾಗೂ ಸಾಂಸ್ಕೃತಿಕ ಮೌಲ್ಯಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ಜನಸಂಖ್ಯಾ ನಿಯಂತ್ರಣಕ್ಕೆ ಶ್ರಮಿಸುತ್ತಿರುವುದು ಭಾರತ ಕುಟುಂಬ ಕಲ್ಯಾಣ ಕಾರ್ಯಕ್ರಮದ ವೈಶಿಷ್ಟ್ಯಗಳಲ್ಲಿ ಒಂದಾಗಿದೆ.

ಯಾವುದೇ ಕಾರ್ಯಕ್ರಮ ಯಶಸ್ವಿಯಾಗಬೇಕಾದರೆ ಜನರು ಅದನ್ನು ಸ್ವೀಕರಿಸಬೇಕು. ಇಡೀ ಸಮುದಾಯ ಆ ಕಾರ್ಯಕ್ರಮದಲ್ಲಿ ಸಂಪೂರ್ಣವಾಗಿ ಪಾಲುಗೊಳ್ಳಬೇಕು. ಕುಟುಂಬ ಕಲ್ಯಾಣ ಕಾರ್ಯಕ್ರಮವು ಸಂಪೂರ್ಣವಾಗಿ ಸ್ವಯಂಸೇವಾ ಕಾರ್ಯಕ್ರಮವಾದುದರಿಂದ ಸಣ್ಣ ಕುಟುಂಬ ಮಾದರಿಯನ್ನು ಸ್ವೀಕರಿಸುವ ಮನೋಭಾವವನ್ನು ಬೆಳೆಸುವುದು ಒಂದು ಕಡೆಯಾದರೆ, ಮತ್ತೊಂದು ಕಡೆ ಗರ್ಭ ನಿರೋಧಕ ವಿಧಾನಗಳನ್ನು ಅನುಸರಿಸುವಂತೆ ಮನವೊಲಿಸುವ ಕಾರ್ಯ ಜೊತೆ ಜೊತೆಯಾಗಿ ಆಗಬೇಕಾಗಿದೆ. ಇದರಲ್ಲಿ ಸಾರ್ವಜನಿಕ ಸಂಘ ಸಂಸ್ಥೆಗಳು ಸಕ್ರಿಯವಾಗಿ ಭಾಗವಹಿಸಿದರೆ ಚೆನ್ನಾಗಿ ನಿರ್ವಹಿಸಬಲ್ಲವು. ದೊಡ್ಡ ಕುಟುಂಬಗಳು ಹಾಗೂ ಗಂಡು ಮಕ್ಕಳ ಬಗ್ಗೆ ಜನರಲ್ಲಿ ಆಳವಾಗಿ ಬೇರೂರಿರುವ ವ್ಯಾಮೋಹ ನಂಬಿಕೆಗಳನ್ನು ನಿವಾರಿಸಲು ಮಹಿಳೆಯರನ್ನು ಸಾಕ್ಷರರನ್ನಾಗಿ ಮಾಡುವುದು, ಮದುವೆಯ ವಯಸ್ಸನ್ನು ಹೆಚ್ಚಿಸಲು, ಶಿಶು ಮತ್ತು ತಾಯಂದಿರ ಮರಣ ಪ್ರಮಾಣವನ್ನು ಕಡಿಮೆ ಮಾಡಲು ಹಾಗೂ ಅರ್ಹ ದಂಪತಿಗಳು ಗರ್ಭ ನಿರೋಧಕ ಸಂರಕ್ಷಣಾ ಕ್ರಮವನ್ನು ಅನುಸರಿಸಲು ಪ್ರೇರೇಪಿಸುವುದು ಮುಂತಾದ ಕಾರ್ಯಕ್ರಮಗಳನ್ನು ಸರ್ಕಾರದ ಜೊತೆಗೆ ಸಂಘ ಸಂಸ್ಥೆಗಳು ಪರಿಣಾಮಕಾರಿಯಾಗಿ ಮಾಡಲು ಸಾಧ್ಯವಿದೆ.

ರಾಷ್ಟ್ರೀಯ ಜನಸಂಖ್ಯಾ ನೀತಿಯ ಅವಶ್ಯಕತೆಯನ್ನು ಮನಗಂಡ ಕೇಂದ್ರ ಸರ್ಕಾರ ಒಂದು ತಜ್ಞರ ಸಮಿತಿಯನ್ನು ನೇಮಿಸಿ ಜನಸಂಖ್ಯಾ ನೀತಿಯ ಕರಡನ್ನು ಸಿದ್ಧಪಡಿಸಿದೆ. ಆ ತಜ್ಞ ಸಮಿತಿ ಕರಡು ನೀತಿಯಲ್ಲಿ ತುಂಬಾ ಸೂಕ್ಷ್ಮವಾದ ಎಚ್ಚರಿಕೆ ಮಾತನ್ನು ಹೇಳಿದೆ. **"ನಮ್ಮ ಜನಸಂಖ್ಯಾ ನೀತಿ ತಪ್ಪಿದರೆ ಉಳಿದ ಯಾವುದೂ ಸರಿಯಾಗಿ ಹೋಗಲು ಅವಕಾಶವೇ ಇರುವುದಿಲ್ಲ".** ಇದು ಪ್ರತಿಯೊಬ್ಬರೂ ಗಮನಿಸಬೇಕಾದ ವಾಸ್ತವಿಕ ಅಂಶ.

●

## ಜ್ಞಾನಾನ್ನ ದಾಸೋಹಿ

**ಸದ್ದುಗದ್ದಲವಿಲ್ಲದೆ ಉದ್ಧರಿಸುತಿಹ,**

**ಮನುಕುಲವ, ವಿದೇಶಕ್ಕೆ ಹೋಗದಿದ್ದರು,**

**ವಿಶ್ವಕಲ್ಯಾಣವ ಬಯಸುತಿಹ,**

**ಕಾಶಾಯಾಂಬರವ ಧರಿಸಿ, ಶಾಂತಿ ಮಂತ್ರವ ಬೋಧಿಸಿ**

**ನಾಡಿನಂಧತೆಯ ಕಳೆವ ಜಂಗಮ ಜ್ಯೋತಿ**

**ಶಿವಕುಮಾರಯತಿ**

**ಇವ ನಮ್ಮ ನಾಡಿನ ಸಂಸ್ಕೃತಿ ಕಾಣಾ ಶ್ರೀಗುರು**

**ರೇವಣಸಿದ್ಧೇಶ್ವರ.**

**-- ಜಿ.ವಿ. ಶಿವಸ್ವಾಮಿ**



ಶ್ರೀಮಠದ ಕಾರ್ಯಾಲಯದ ಮುಂದೆ ಶೈಕ್ಷಣಿಕ ವರ್ಷದಲ್ಲಿ ತಮ್ಮ ಮಕ್ಕಳನ್ನು ಶ್ರೀಕ್ಷೇತ್ರಕ್ಕೆ ಸೇರಿಸಲು ಕಾಯುತ್ತಿರುವ ಮಕ್ಕಳು ಮತ್ತು ಪೋಷಕರು



ಹೊಸದಾಗಿ ಸೇರಿರುವ ವಿದ್ಯಾರ್ಥಿಗಳು ಸಾಮೂಹಿಕ ಪ್ರಾರ್ಥನೆಯ ನಂತರ ಪ್ರಸಾದ ಸ್ವೀಕರಿಸಲು ಅಣಿಯಾಗುತ್ತಿರುವ ದೃಶ್ಯ





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಕಳೆದ ಸಂಚಿಕೆಯಿಂದ)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 142. | ಶ್ರೀ ಯೋಗೀಶ್ ಗಿರಿಯಪ್ಪ ಎರೇಸೀಮೆ<br>ಹರವಿ ಗ್ರಾಮ, ಹಾನಗಲ್‌ಅಂಚೆ,<br>ತೆವರೆಮೆಳ್ಳ ಹಳ್ಳಿ,<br>ಪಿನ್ : 581 202 | 1001-00 |
| 143. | ಶ್ರೀ ಚಂದ್ರಮತಿ,<br>ಶ್ರೀ ಬಿ. ರಾಜಶೇಖರ್‌ರವರ ಸಹೋದರಿ,<br>ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | 1001-00 |
| 144. | ಶ್ರೀ ಟಿ. ಎಂ.ಮಲ್ಲೇಶಯ್ಯ,<br>ಡಿ.ನಂ. 379, ಸಿ ಬ್ಲಾಕ್, 12ನೇ ಕ್ರಾಸ್,<br>ಆರ್.ಕೆ ನಗರ,<br>ಮೈಸೂರು-570 023. | 1001-00 |
| 145. | ಶ್ರೀ ಎನ್. ಚಂದ್ರಶೇಖರಯ್ಯ<br>ಸಿ.ಹೆಚ್. 53, 6ನೇ ಮೈನ್,<br>ಸರಸ್ವತಿಪುರಂ,<br>ಮೈಸೂರು-570 009 | 1001-00 |
| 146. | ಡಾ. ಸಿ.ಜಿ. ರಾಜು ಮತ್ತು ವೈ.ಎಂ. ಲೀಲಾಂಬ,<br>ನಂ. 428, 5ನೇ ಕ್ರಾಸ್,<br>7ನೇ ಬ್ಲಾಕ್, ಜಯನಗರ,<br>ಬೆಂಗಳೂರು. | 1101-00 |
| 147. | ಶ್ರೀ ಜಿ.ವೈ. ಕವಿತಾ ಮತ್ತು ಶ್ರೀ ವಿರುಪಾಕ್ಷಯ್ಯ<br>ನಂ. 112, ವಿನಾಯಕ ಬಡಾವಣೆ, 3ನೇ ಹಂತ,<br>ವಿಜಯನಗರ, 2ನೇ ಸ್ಟೇಜ್, ಬೆಂಗಳೂರು-560 040. | 5001-00 |
| 148. | ಶ್ರೀ ಕೆ.ಬಿ.ಗಂಗಣ್ಣನವರು,<br>ಮನೆ ನಂ. 221,<br>7ನೇ ಎ ಕ್ರಾಸ್,<br>ಆರ್.ಪಿ.ಸಿ. ಲೇ ಔಟ್,<br>ಬೆಂಗಳೂರು - 560 040. | 5001-00 |
| 149. | ಶ್ರೀ ಎ.ಎಂ. ನಿರಂಜನಮೂರ್ತಿ ಚನ್ನಮ್ಮ<br>ನಾಗತಿಹಳ್ಳಿ ಮತ್ತು ಅಂಚೆ,<br>ಚಳ್ಳಕೆರೆ ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ - 577 538 | 1111-00 |
| 150. | ಶ್ರೀ ಹೆಚ್. ಮಲ್ಲಿಕಾರ್ಜುನ ಸ್ವಾಮಿ<br>ಬಿನ್ ಶ್ರೀ ಹನುಮಂತೇಗೌಡ,<br>ಹುಲ್ಲೀನಹಳ್ಳಿ ಗ್ರಾಮ ಮತ್ತು ಅಂಚೆ,<br>ತಿಪ್ಪಸಂದ್ರ ಹೋಬಳಿ, ಮಾಗಡಿ ತಾಲ್ಲೂಕು. | 1001-00 |
| 151. | ಶ್ರೀ ಎ. ರುದ್ರಪ್ಪ ಬಿನ್ ಪಿ.ಎ.ಕೆ. ಉರಿಯಪ್ಪ,<br>ಹಳೆ ರಕ್ಷಣಾಪುರ,<br>ಪೋಸ್ಟ್ ಆಫೀಸ್ ರಸ್ತೆ,<br>ರಂಗೋಲಿಹಳ್ಳಿ, ಹಾಸನ-573 201. | 1001-00 |

ತನುವ ಮರೆಯಬೇಕೆಂದು ಗುರುವ ತೋರಿ,
ಮನವ ಮರೆಯಬೇಕೆಂದು ಲಿಂಗವ ತೋರಿ,
ಧನವ ಮರೆಯಬೇಕೆಂದು ಜಂಗಮವ ತೋರಿ,
ಲೇಸ ಮರೆದು ಕಷ್ಟಕ್ಕೆ ಕಡಿದಾಡುವ
ಭಾಷೆಹೀನರ ಕಂಡು ನಾಚಿಕೆಯಾಯಿತ್ತು!
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ.

-- ಘಟ್ಟಿವಾಳಯ್ಯ

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವವರು
ವೀರರೂ ಅಲ್ಲ; ಧೀರರೂ ಅಲ್ಲ
ಇದು ಕಾರಣ, ನೆರೆ ಮೂರು ಲೋಕವೆಲ್ಲವು
ಹಲ್ಲಣವ ಹೊತ್ತು ಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನೆತ್ತಬಲ್ಲರೊ?

-- ಅಲ್ಲಮ ಪ್ರಭು

## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 75. | ಶ್ರೀ ಪಶುಪತಿ ಪ್ರಶಾಂತ್<br>ನಂ. 19, ಪಾರ್ಕ್ ರಸ್ತೆ,<br>ಬೆಂಗಳೂರು-53 | 1,101-00 |
| 76. | ಶ್ರೀಮತಿ ಮಹಾದೇವಮ್ಮ ಚಿಕ್ಕರಾಜಪ್ಪ<br>ಪಾರ್ಕ್ ರಸ್ತೆ,<br>ಬೆಂಗಳೂರು-53 | 1,101-00 |
| 77. | ಶ್ರೀಮತಿ ಜಯಮ್ಮ ಚನ್ನಬಸಪ್ಪ<br>ನಂ. 158, 6ನೇ ಮುಖ್ಯ, 4ನೇ ಬ್ಲಾಕ್,<br>ಜಯನಗರ, ಬೆಂಗಳೂರು-11. | 1,101-00 |
| 78. | ಡಾ. ಸಿ.ಜಿ. ರಾಜು & ವೈ.ಎಂ. ಲೀಲಾಂಬಾ<br>ನಂ. 428, 5ನೇ ಕ್ರಾಸ್, 7ನೇ ಬ್ಲಾಕ್,<br>ಜಯನಗರ ಪಶ್ಚಿಮ, ಬೆಂಗಳೂರು. | 4,001-00 |
| 79. | ಶ್ರೀ ಎಸ್. ತಿಮ್ಮಯ್ಯ<br>ನಿವೃತ್ತ ನಿರ್ದೇಶಕರು,<br>ನಂ. ಎಂ.ಆರ್. 18,<br>ಸರ್ಕುಲರ್ ರಸ್ತೆ, ನಂದಿನಿ ಲೇಔಟ್,<br>ಬೆಂಗಳೂರು-96. | 1,105-00 |
| 80. | ಶ್ರೀ ಜಿ.ವೈ. ಕವಿತ & ವಿರೂಪಾಕ್ಷಯ್ಯ,<br>ವಿರೂಪಾಕ್ಷಯ್ಯ, ನಂ. 112,<br>ವಿನಾಯಕ ಬಡಾವಣೆ, 3ನೇ ಸ್ಟೇಜ್,<br>ವಿಜಯನಗರ 2ನೇ ಹಂತ, ಬೆಂಗಳೂರು-40. | 5,001-00 |
| 81. | ಲಿಂಗೈಕ್ಯ ಸಾವಿತ್ರಮ್ಮನವರ ಹೆಸರಿನಲ್ಲಿ<br>ಶ್ರೀ ಎಸ್. ರೇಣುಕಾರಾಧ್ಯ,<br>ದಾಸೇನಹಳ್ಳಿ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 5,001-00 |
| 82. | ಶ್ರೀ ಎ.ಎಂ. ನಿರಂಜನಮೂರ್ತಿಚನ್ನಮ್ಮ<br>ನಾಗತಿಹಳ್ಳಿ ಅಂಚೆ,<br>ಚಳ್ಳಕೆರೆ ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ. | 1,111-00 |
| 83. | ಡಾ. ಟಿ.ಎನ್. ಕಮಲಾಕ್ಷಪ್ಪ<br>ನಿವೃತ್ತ ವೈದ್ಯಾಧಿಕಾರಿಗಳು,<br>ನಂ. 29, 'ಶ್ರೀ ಶಿವಲಿಂಗೇಶ್ವರ ಕೃಪ',<br>1ನೇ ಮುಖ್ಯ ರೋಡ್, ಕುಂಬಾರಕೊಪ್ಪಲು,<br>ಮೈಸೂರು-570016 | 1,111-00 |
| 84. | ಮೆ. ಶ್ರೀ ಸಚ್ಚಿದಾನಂದ ಜನಸೇವಾ ಸಮಿತಿ,<br>ಉಡುಕುಂಟೆ, ಸೋಲೂರು ಹೋಬಳಿ,<br>ಮಾಗಡಿ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | 1,101-00 |
| 85. | ಶ್ರೀ ಹೆಚ್. ಆರ್. ಪ್ರಸಾದ್,<br>ಕಾಫಿ ಬೆಳೆಗಾರರು, ಅನುಪಮ ಎಸ್ಟೇಟ್,<br>ಹಳಸುಳಿಗೆ ಅಂಚೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | 1,111-00 |
| 86. | ಶ್ರೀಮತಿ ಗೌರಮ್ಮ<br>ನಂ. 484, 8ನೇ ಮುಖ್ಯ ರಸ್ತೆ,<br>2ನೇ ಕ್ರಾಸ್, ವಿಜಯನಗರ, ಬೆಂಗಳೂರು-40. | 5,555-00 |
| 87. | ಶ್ರೀ ಎ. ರುದ್ರಪ್ಪ<br>ತಂದೆ ಪಿ.ಎ.ಕೆ. ಉರಿಯಪ್ಪ,<br>ಹಳೆರಕ್ಷಣಾಪುರ, ಅಂಚೆ ಕಛೇರಿ ರಸ್ತೆ,<br>ರಂಗೋಲಿಹಳ್ಳಿ, ಹಾಸನ ಜಿಲ್ಲೆ-573 201 | 1,202-00 |
| 88. | ಶ್ರೀಮತಿ ಪುಟ್ಟಮ್ಮ ತುಳಸೀರಾಮಯ್ಯ,<br>ಕೋಂ. ಶ್ರೀ ತುಳಸೀರಾಮಯ್ಯ,<br>ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರ,<br>ಎಂ.ಎಸ್. ಬಿಲ್ಡಿಂಗ್, ಬೆಂಗಳೂರು-560 001. | 1,102-00 |
| 89. | ಶ್ರೀ ತುಳಸೀರಾಮಯ್ಯ,<br>ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ<br>ಕರ್ನಾಟಕ ಸರ್ಕಾರ, ಎಂ.ಎಸ್. ಬಿಲ್ಡಿಂಗ್,<br>ಬೆಂಗಳೂರು-560 001. | 1,101-00 |
| 90. | ಶ್ರೀ ಎನ್. ಬಿ. ಸರೋಜಮ್ಮ<br>ಬಸವೇಶ್ವರ ಬಡಾವಣೆ,<br>ಕ್ಯಾತಸಂದ್ರ ಅಂಚೆ, ತುಮಕೂರು-572104 | 1,101-00 |

(ಮುಂದುವರೆಯುವುದು)

ಜ್ಞಾನಿಗೆ ಬಂದ ದಾರಿದ್ರ್ಯಕ್ಕಿಂತ ಅಜ್ಞಾನಿಗೆ ಬಂದ ಐಶ್ವರ್ಯದಿಂದ ಸಮಾಜಕ್ಕೆ ಹೆಚ್ಚು ಹಾನಿ

- ತಿರುಕ್ಕುರಳ್



ಶ್ರೀಮಠದಲ್ಲಿ ಹೊಸದಾಗಿ ಸೇರಲು ನಾಡಿನ ವಿವಿಧ ಭಾಗಗಳಿಂದ ಬಂದಿರುವ ಮಕ್ಕಳನ್ನು ದಾಖಲಾತಿಯ ಮುನ್ನ ಪರಮಪೂಜ್ಯ ಶ್ರೀಶ್ರೀಗಳವರು ವಿಚಾರಿಸುತ್ತಿರುವುದು.



ತಮ್ಮ ಮಕ್ಕಳನ್ನು ಶ್ರೀಕ್ಷೇತ್ರದಲ್ಲಿ ದಾಖಲು ಮಾಡಲು ಬಂದಿರುವ ಪೋಷಕರ ಒಂದು ದೃಶ್ಯ

***Printed at : Geetanjali Printers, Bangalore-54***